ಉಪನ್ಯಾಸ
ಗ್ರಂಥಮಾಲೆ

೨೦೯

# ಜನಸಂಖ್ಯಾ ಸ್ಫೋಟ ಮತ್ತು ಅಂತರ್ರಾಷ್ಟ್ರೀಯ ಜನಸಂಖ್ಯಾ ವರ್ಷ

ಪಿ. ಬಿ. ಅಂಗಡಿ




ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಮಾರ್ಚ್, ೧೯೭೪

ರಜತ ಮಹೋತ್ಸವದ ಪ್ರಕಟಣೆ

ಉಪನ್ಯಾಸ ಗ್ರಂಥಮಾಲೆ

೨೦೯

# ಜನಸಂಖ್ಯಾ ಸ್ಫೋಟ ಮತ್ತು ಅಂತರ್ರಾಷ್ಟ್ರೀಯ ಜನಸಂಖ್ಯಾ ವರ್ಷ

ಪಿ. ಬಿ. ಅಂಗಡಿ, ಎಂ. ಎ.







ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಮಾರ್ಚ, ೧೯೭೫

ಪ್ರಕಾಶಕರು :

**ಎಸ್. ಎಸ್. ಒಡೆಯರ,** ಎಂ. ಎ., ಎಲ್‌ಎಲ್. ಬಿ.
ಕುಲಸಚಿವರು
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ : ಮಾರ್ಚ, ೧೯೭೫
೫,೦೦೦ ಪ್ರತಿಗಳು



**ಬೆಲೆ : ೨೫ ಪೈಸೆ**

ಮುದ್ರಕರು :

**ಕೆ. ಜಿ. ಜೋಶಿ**
ಕೆ. ಇ. ಬೋರ್ಡ ಪ್ರಿಂಟಿಂಗ ಪ್ರೆಸ್,
ಧಾರವಾಡ–೧

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ವ್ಯಾಸಂಗ ವಿಸ್ತರಣ ಹಾಗೂ ಪ್ರಕಟನ ಶಾಖೆಯ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಅದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕ ಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯಕ್ಕೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನ ಭಾಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಉಪನ್ಯಾಸ ಮಾಲೆಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವುದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂಥ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರೆವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೨೦೮ ಪುಸ್ತಕಗಳು ಪ್ರಕಟವಾಗಿವೆ. ಅವು ಅಚ್ಚಾಗಿ ಹೊರ ಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡುಕೊಳ್ಳುತ್ತಾರೆ. ಅನೇಕ ಪುಸ್ತಕಗಳು ನಾಲ್ಕು-ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ
೧೨-೩-೧೯೭೫

**ಆರ್. ಸಿ. ಹಿರೇಮಠ**
ಕುಲಪತಿ

# ಅರಿಕೆ

ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಉಪನ್ಯಾಸ ಮಾಲೆಯಲ್ಲಿ ದಿನಾಂಕ ೧೨–೧೨–೧೯೭೪ರಂದು ಬಳ್ಳಾರಿ ಜಿಲ್ಲೆಯ ಚಿಕ್ಕಜೋಗಿಹಳ್ಳಿಯಲ್ಲಿ 'ಜನಸಂಖ್ಯಾ ಸ್ಫೋಟ ಮತ್ತು ಅಂತರರಾಷ್ಟ್ರೀಯ ಜನಸಂಖ್ಯಾ ವರ್ಷ' ಎಂಬ ವಿಷಯದ ಮೇಲೆ ನಾನು ಕೊಟ್ಟ ಉಪನ್ಯಾಸದಿಂದ ಈ ಕಿರುಹೊತ್ತಿಗೆಯನ್ನು ತಯಾರಿಸಲಾಗಿದೆ.

ಸಂಯುಕ್ತರಾಷ್ಟ್ರ ಸಂಘವು ಇಂದಿನ ಜನಸಂಖ್ಯಾ ಸಮಸ್ಯೆಯತ್ತ ಎಲ್ಲ ದೇಶಗಳ ಗಮನ ಸೆಳೆಯಲು ೧೯೭೪ ನೇ ಇಸ್ವಿಯನ್ನು 'ಅಂತರರಾಷ್ಟ್ರೀಯ ಜನಸಂಖ್ಯಾ ವರ್ಷ'ವೆಂದು ಸಾರಿದ್ದರ ಹಿನ್ನೆಲೆಯಲ್ಲಿ, ಜನಸಾಮಾನ್ಯರನ್ನು ಗಮನದಲ್ಲಿಟ್ಟುಕೊಂಡು, ಇಲ್ಲಿ ವಿಷಯದ ವಿವೇಚನೆಯನ್ನು ಮಾಡಲಾಗಿದೆ.

ಈ ಸಮಸ್ಯೆಗೆ ಸಂಬಂಧಿಸಿದ ಇತ್ತೀಚಿನ ಅಂಕಿ ಸಂಖ್ಯೆಗಳನ್ನು ಪತ್ರಿಕೆಗಳಿಂದ ಮತ್ತು ಕೆಲವು ಪುಸ್ತಕಗಳಿಂದ ಸಂಗ್ರಹಿಸಿ, ಜಾಗತಿಕ ಅದರಲ್ಲೂ ಭಾರತದ ಜನಸಂಖ್ಯೆಯ ಚಿತ್ರವನ್ನು ಕೊಡಲಾಗಿದೆ. ಸಾಮಾನ್ಯ ಓದುಗರಿಗೆ ಜಾಗತಿಕ ಮತ್ತು ಭಾರತದ ಜನಸಂಖ್ಯಾ ಬೆಳವಣಿಗೆಯ ತೀವ್ರತೆ, ಅದರ ಕಾರಣಗಳು, ಅದರಿಂದುಂಟಾಗುವ ಗಂಭೀರ ಪರಿಣಾಮಗಳು ಮತ್ತು ಭವಿಷ್ಯತ್ತಿನ

ಅಪಾಯಗಳನ್ನು ತಪ್ಪಿಸಲು ಸೂಕ್ತ ಪರಿಹಾರ ಕ್ರಮಗಳನ್ನು ತಿಳಿಸಿಕೊಡಲು ಪ್ರಯತ್ನಿಸಲಾಗಿದೆ. ಓದುಗರು ಇದರ ಮರ್ಮ ವನ್ನರಿತುಕೊಂಡರೆ ನನ್ನ ಶ್ರಮ ಸಾರ್ಥಕ.

ಈ ಕಿರುಹೊತ್ತಿಗೆಯ ವಿಷಯ ಸಮೀಕ್ಷೆಯಲ್ಲಿ ಕೆಲವು ಗ್ರಂಥಗಳ ನೆರವು ಪಡೆದಿದ್ದೇನೆ. ಆದ್ದರಿಂದ ಆಯಾ ಗ್ರಂಥಕರ್ತೃ ಗಳಿಗೆ ನನ್ನ ಕೃತಜ್ಞತೆಗಳು.

ಕರ್ನಾಟಕ ವಿಶ್ವವಿದ್ಯಾಲಯವು ತಾನು ಏರ್ಪಡಿಸುತ್ತಿರುವ ಉಪನ್ಯಾಸ ಶಿಬಿರದಲ್ಲಿ ಭಾಗವಹಿಸಲು ಆಹ್ವಾನಿಸಿ, ನನ್ನ ಉಪ ನ್ಯಾಸವನ್ನು ಪುಸ್ತಿಕೆಯ ರೂಪದಲ್ಲಿ ಪ್ರಕಟಿಸಿದ್ದಕ್ಕಾಗಿ ವ್ಯಾಸಂಗ ವಿಸ್ತರಣ ಹಾಗೂ ಪ್ರಕಟನ ಶಾಖೆಯ ಅಧಿಕಾರವರ್ಗಕ್ಕೆ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

**ಪಿ. ಬಿ. ಅಂಗಡಿ**
ಅರ್ಥಶಾಸ್ತ್ರ ವಿಭಾಗದ ರೀಡರ
ಮತ್ತು ಮುಖ್ಯಸ್ಥರು

ಜಿ. ಎಚ್. ಕಲಾ ಮತ್ತು
ವಿಜ್ಞಾನ ಮಹಾವಿದ್ಯಾಲಯ
ಹಾವೇರಿ
೧೬-೩-೧೯೭೫

# ಪರಿವಿಡಿ

# ೧. ಪೀಠಿಕೆ

ಜಾಗತಿಕ ಸಂಸ್ಥೆಯಾದ ಸಂಯುಕ್ತರಾಷ್ಟ್ರಸಂಘವು ೨೪-೧೦-೧೯೪೫ರಲ್ಲಿ ಜನ್ಮ ತಾಳಿತು. ಅದರ ಮೂಲ ಉದ್ದೇಶವೇನೆಂದರೆ ಜಾಗತಿಕ ಶಾಂತಿ ಮತ್ತು ಸಮೃದ್ಧಿ. ಆದ್ದರಿಂದಲೇ ಆ ಮಹಾನ್ ಸಂಸ್ಥೆಯು ತನ್ನ ಅಂಗಸಂಸ್ಥೆಗಳಾದ 'ಜಾಗತಿಕ ಕಾರ್ಮಿಕ ಸಂಸ್ಥೆ'. 'ಜಾಗತಿಕ ಆಹಾರ ಮತ್ತು ಕೃಷಿ ಸಂಸ್ಥೆ'. 'ಜಾಗತಿಕ ಆರೋಗ್ಯ ಸಂಸ್ಥೆ' ಮುಂತಾದವುಗಳ ಮುಖಾಂತರ. ಆರ್ಥಿಕ. ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ರಂಗಗಳಲ್ಲಿ ಅನೇಕ ಕ್ರಮಗಳನ್ನು ಯೋಜಿಸುತ್ತಿರುತ್ತದೆ.

ಇಂದಿನ ಪ್ರಪಂಚದಲ್ಲಿ ಅನೇಕ ರಾಷ್ಟ್ರಗಳು ಅದರಲ್ಲಿಯೂ ಅನಭಿವೃದ್ಧ ರಾಷ್ಟ್ರಗಳು ಜನಸಂಖ್ಯಾ ಸ್ಫೋಟ. ಆಹಾರ ಸಮಸ್ಯೆ. ನಿರುದ್ಯೋಗತನ. ಅತಿಪ್ರಸರಣ. ದಾರಿದ್ರ್ಯ. ರೋಗರುಜಿನಗಳು ಮತ್ತು ಆರ್ಥಿಕ ವೈಷಮ್ಯತೆಗಳಿಂದ ಬಳಲುತ್ತಿವೆ. ಈ ಸಮಸ್ಯೆಗಳ ಪರಿಹಾರಕ್ಕೆ ರಾಷ್ಟ್ರೀಯ ಕ್ರಮಗಳ ಜೊತೆಗೆ ಅಂತರ್ರಾಷ್ಟ್ರೀಯ ಕ್ರಮಗಳೂ ಅವಶ್ಯವಿರುವವು. ಆದ್ದರಿಂದಲೇ ಸಂಯುಕ್ತ ರಾಷ್ಟ್ರ ಸಂಸ್ಥೆಯು ೧೯೭೪ನೇ ಇಸ್ವಿಯನ್ನು 'ಜಾಗತಿಕ ಜನಸಂಖ್ಯಾ ವರುಷ'ವೆಂದು ಸಾರಿತು. ಇದರ ಉದ್ದೇಶವೇನೆಂದರೆ ಎಲ್ಲ ಸಮಸ್ಯೆಗಳಿಗೆ ಮೂಲವಾದ ಜನಸಂಖ್ಯಾ ಹೆಚ್ಚಳವನ್ನು ತಡೆಗಟ್ಟಿ

ಲಾಗಿದೆ. ಸಂ. ರಾ. ಸಂಸ್ಥೆಯ ಕರೆಯ ಫಲವಾಗಿ, ಭಾರತವನ್ನೊಳ ಗೊಂಡು ಎಲ್ಲ ಸದಸ್ಯ ರಾಷ್ಟ್ರಗಳೂ ೧೯೭೪ನೇ ಇಸ್ವಿಯನ್ನು 'ಅಂತರಾಷ್ಟ್ರೀಯ ಜನಸಂಖ್ಯಾ ವರುಷ'ವೆಂದು ಆಚರಿಸಿದವು.

ಈಗ ಜನಸಂಖ್ಯೆ ಸಮಸ್ಯೆಯ ಗಾತ್ರ. ತೀವ್ರತೆ ಮತ್ತು ಗಂಡಾಂತರಗಳನ್ನು ಸಂಕ್ಷಿಪ್ತವಾಗಿ ಇಲ್ಲಿ ವಿಶ್ಲೇಷಿಸೋಣ. ಅಂದರೆ ನಾವು ಸಮಸ್ಯೆಯ ಕಾರಣಗಳು, ಪರಿಹಾರೋಪಾಯಗಳು ಮತ್ತು ಮುಂದಿನ ಕ್ರಮಗಳನ್ನು ಕಂಡುಕೊಳ್ಳಬಹುದು. ಈ ವಿವೇಚನೆ ಯಲ್ಲಿ ಭಾರತವನ್ನೇ ಮುಖ್ಯ ಆಧಾರವನ್ನಾಗಿ ಇಟ್ಟುಕೊಳ್ಳ ಲಾಗಿದೆ. ಯಾಕಂದರೆ ನಮ್ಮ ದೇಶವು ಅತಿ ಜನಸಂಖ್ಯೆಯಿಂದ ನರಳುತ್ತಿರುವ ಅತಿ ದೊಡ್ಡ ಪ್ರಜಾಪ್ರಭುತ್ವವಾದಿ ದೇಶವಾಗಿದೆ.

ಈ ಜಗತ್ತಿನ ಜನಸಂಖ್ಯೆಯು ಈ ಶತಕದ ಪ್ರಾರಂಭದಲ್ಲಿ ಕೇವಲ ೧೫೦ ಕೋಟಿ ಇದ್ದದ್ದು ಈಗ ಅದು ೪೦೦ ಕೋಟಿಗಳ ಷ್ಟಾಗಿದೆ. ಉತ್ತರ ಅಮೇರಿಕ. ಯುರೋಪ. ಆಸ್ಟ್ರೇಲಿಯಾಗಳನ್ನು ಬಿಟ್ಟರೆ, ಲ್ಯಾಟಿನ್ ಅಮೇರಿಕ. ಆಫ್ರಿಕ ಮತ್ತು ಏಶಿಯಾಗಳಲ್ಲಿ ಜನಸಂಖ್ಯೆ ಹೆಚ್ಚಳವು ಭರದಿಂದ ಸಾಗಿದೆ. ವಾರ್ಷಿಕ ಸರಾಸರಿ ಹೆಚ್ಚಳವು ಲ್ಯಾಟಿನ ಅಮೇರಿಕೆಯಲ್ಲಿ ೨.೯ ಇದ್ದರೆ. ಆಫ್ರಿಕೆಯಲ್ಲಿ ೨.೭ ಮತ್ತು ಏಶಿಯಾದಲ್ಲಿ ೨.೫ರಷ್ಟಿರುವದು. ಈ ಸರಾಸರಿಯು ಒಟ್ಟು ಜಗತ್ತಿನಲ್ಲಿ ನೂರಕ್ಕೆ ೨ರಷ್ಟಿರುವದು. ಅಂದರೆ ಜಗತ್ತಿನ ಜನಸಂಖ್ಯೆಯು ಪ್ರತಿ ವರುಷಕ್ಕೆ ೭ರಿಂದ ೭॥ ಕೋಟಿಯಷ್ಟು ಹೆಚ್ಚಾಗುತ್ತಿದೆ. ಇದೇ ರೀತಿ ಅದು ಮುಂದುವರಿದರೆ ಈ ಶತಕದ ಕೊನೆಯಲ್ಲಿ ಜಾಗತಿಕ ಜನಸಂಖ್ಯೆಯು ಸುಮಾರು ೬೫೦ ಕೋಟಿ ಯಾಗುವದು. ಅದೇ ವೇಳೆಗೆ ಅಮೇರಿಕ. ಆಫ್ರಿಕ ಮತ್ತು ಏಶಿಯಾ

ಖಂಡಗಳಲ್ಲಿ ಜಗತ್ತಿನ ೮೦ರಷ್ಟು ಜನರಿರುವರು. ಏಶಿಯಾ ಖಂಡವೊಂದರಲ್ಲಿಯೇ ಪ್ರಪಂಚದ ಜನಸಂಖ್ಯೆಯಲ್ಲಿ ೧೦೦ಕ್ಕೆ ಸುಮಾರು ೪೦ರಷ್ಟು ಜನರಿರುವರು.

ಕೆಲವು ವಿಶ್ವವಿಖ್ಯಾತ ತಜ್ಞರ ಪ್ರಕಾರ, ಜನಸಂಖ್ಯಾ ಸ್ಫೋಟವು ಹೀಗೆಯೇ ಮುಂದುವರಿದರೆ, ಹಲವಾರು ಶತಕಗಳ ಅನಂತರ. ಭೂಮಿಯ ಮೇಲೆ ಜನರಿಗೆ ಸರಿಯಾಗಿ ನಿಲ್ಲಲು ಕೂಡ ಸ್ಥಳವಿಲ್ಲದೇ ಒಬ್ಬರನ್ನೊಬ್ಬರು ಬಿಗಿಯಾಗಿ ಅಪ್ಪಿಕೊಂಡು ನಿಲ್ಲಬೇಕಾಗಿ ಬರುವದು ! ಇದು ಸ್ವಲ್ಪ ಕಾಲ್ಪನಿಕ ಮತ್ತು ಅತಿಶಯೋಕ್ತಿ ಎನಿಸಿದರೂ ವಿಶ್ವದ ಜನಸಂಖ್ಯೆ ಪ್ರತಿ ೩೫-೪೦ ವರ್ಷಕ್ಕೆ ಇಮ್ಮಡಿಯಾಗುತ್ತ ಹೋಗುವದು ಮಾತ್ರ ಖಂಡಿತ. ನೋಬೆಲ್ ಪಾರಿತೋಷಕ ವಿಜೇತರಾದ ಡಾ. ಬೋಲೋರ್ಗರ ಭವಿಷ್ಯದಂತೆ ಬರುವ ದಶಕದಲ್ಲಿ ಕೋಟ್ಯಂತರ ಜನರು ಹಸಿವೆಯಿಂದ ಸಾವಿಗೀಡಾಗಬೇಕಾಗುವದು. ಇತ್ತೀಚೆಗೆ ರೋಮ್‌ದಲ್ಲಿ ಸಮಾವೇಶಗೊಂಡ ಜಾಗತಿಕ ಆಹಾರ ಪರಿಷತ್ತಿನಲ್ಲಿ, ಅಂತರಾಷ್ಟ್ರೀಯ ಆರೋಗ್ಯ ಸಂಸ್ಥೆಯ ಶ್ರೀ ಬೋಯರ್ಮಾ ಅವರು ಇದೇ ರೀತಿಯ ಎಚ್ಚರಿಕೆಯನ್ನು ನೀಡಿರುವರು. ಇತ್ತೀಚೆಗೆ ಬುಖಾರೆಸ್ಟದಲ್ಲಿ ಸೇರಿದ್ದ ಜಾಗತಿಕ ಜನಸಂಖ್ಯಾ ಸಮ್ಮೇಳನವು ಬರುವ ಹಲವಾರು ವರ್ಷಗಳಲ್ಲಿ ವಿಶ್ವಜನಸಂಖ್ಯೆಯ ಸರಾಸರಿ ವಾರ್ಷಿಕ ಹೆಚ್ಚಳವನ್ನು ೧೦೦ಕ್ಕೆ ೧.೭ರ ಮಟ್ಟಕ್ಕೆ ಇಳಿಸದಿದ್ದರೆ, ಬರಗಾಲದ ಭೀತಿಯು ತಪ್ಪಿದ್ದಲ್ಲ ಎಂದು ಢಾಣಾ ಡಂಗುರವಾಗಿ ಸಾರಿದೆ.

ಭಾರತದ ಮಟ್ಟಿಗೆ ಹೇಳಬೇಕೆಂದರೆ. ಈ ಶತಕದ ಪ್ರಾರಂಭ

ದಲ್ಲಿ ಜನಸಂಖ್ಯೆಯು ೨೦ಕೋಟಿ ಇದ್ದದ್ದು ಈಗ ೫೬ ಕೋಟಿಗಳಿಗೇರಿದೆ. ಕಳೆದ ದಶಕದಲ್ಲಿ ವಾರ್ಷಿಕ ಸರಾಸರಿ ಹೆಚ್ಚಳವು ೧೦೦ಕ್ಕೆ ೨.೪ ರಷ್ಟಿತ್ತು. ಪ್ರತಿ ವರುಷ ೧೨-೧೩ ದಶಲಕ್ಷ ಹೊಸ ಬಾಯಿಗಳು ಹುಟ್ಟುತ್ತವೆ. ಅಂದರೆ ವರ್ಷಂಪ್ರತಿ ಭಾರತಕ್ಕೆ ಇಡೀ ಆಸ್ಟ್ರೇಲಿಯಾ ದೇಶದ ಜನಸಂಖ್ಯೆಯನ್ನು ಕೂಡಿಸಿದಂತೆ! ಅದರ ಮೇಲೆ ಕೂಸುಗಳ ಮಳೆ—'ರೇನ್ ಆಫ್ ಬೇಬೀಜ್' ಆಗುತ್ತಿರುವದೆ? ಇದು ಹೀಗೆಯೇ ಮುಂದೆ ಸಾಗಿದರೆ ನಮ್ಮ ದೇಶದಲ್ಲಿ ೧೯೮೬ರಲ್ಲಿ ೭೦ ಕೋಟಿ ಮತ್ತು ೨೦೦೦ನೇ ಇಸ್ವಿಯಲ್ಲಿ ೯೦ ಕೋಟಿ ಜನರಾಗುವರು. ಈ ದೇಶವು ಜಗತ್ತಿನ ವಿಸ್ತಾರದಲ್ಲಿ ಪ್ರತಿಶತ ೨ರಷ್ಟಿದ್ದರೆ, ಜನಸಂಖ್ಯೆಯಲ್ಲಿ ಪ್ರತಿಶತ ೧೫ರಷ್ಟಿದೆ. ವಿಶ್ವದಲ್ಲಿ ಕಮ್ಯುನಿಸ್ಟ ಚೀನದ ಅನಂತರ ಭಾರತವೇ ಅತಿ ದೊಡ್ಡ ದೇಶ. ಹೀಗೆ ಜನಸಂಖ್ಯೆಯಲ್ಲಿ ೨ನೇ ನಂಬರ ಇದ್ದರೂ. ವಾರ್ಷಿಕ ಸರಾಸರಿ ತಲಾ ಆದಾಯದಲ್ಲಿ ೧೦೩ನೇ ನಂಬರ ಇರುವದು. ನಮ್ಮಲ್ಲಿಯು ತೀವ್ರ ಆಹಾರ ಸಮಸ್ಯೆ. ನಿರುದ್ಯೋಗವು ಪೆಡಂಭೂತ. ರೋಗರುಜಿನಗಳನ್ನು ನೋಡಿದರೆ. ಥಾಮಸ್. ರಾಬರ್ಟ ಮಾಲ್ಥಸ್‌ನ ಜನಸಂಖ್ಯಾ ಸಿದ್ಧಾಂತವು 'ಸತ್ತ ಕುದುರೆ' ಆದರೆ. ಜೀವಂತ ತತ್ತ್ವಪ್ರಣಾಲಿಕೆ ಎಂದೆನಿಸದಿರದು.

'ಅಂತರಾಷ್ಟ್ರೀಯ ಜನಸಂಖ್ಯಾ ವರುಷ' ಎಂದರೆ ಕೇವಲ ಜನಸಂಖ್ಯಾ ಹೆಚ್ಚಳದ ಗತಿಯನ್ನು ಕಡಿಮೆ ಮಾಡುವದು ಪರಮಾರ್ಥವಲ್ಲ. ಅದರ ಜೊತೆಗೆ ಜನಸಂಖ್ಯಾ ಯೋಜನೆ. ಗುಣಮಟ್ಟದ ಸುಧಾರಣೆ. ಆಹಾರೋತ್ಪಾದನೆಯ ಹೆಚ್ಚಳವೂ ಆಗಿದೆ. ಅಂದರೆ ಮಾತ್ರ ಸಮಸ್ಯೆಯು ನಿಜವಾಗಿಯೂ ಪರಿಹಾರವಾಗುವದು.

ಇದಕ್ಕೆ ಎಲ್ಲ ರಾಷ್ಟ್ರಗಳ ಸಹಕಾರ, ಜಾಗತಿಕ ಮಟ್ಟದಲ್ಲಿ ಸುದೀರ್ಘ ಯೋಜನೆ, ದಿಟ್ಟವಾದ ಕ್ರಮಗಳು, ದೃಢವಾದ ಕಾರ್ಯಾಚರಣೆ ಅವಶ್ಯವಿರುವವು. ಈ ಜಟಿಲ ಸಮಸ್ಯೆಯನ್ನು ಯಾವ ದೇಶವೂ ಏಕಾಕಿಯಾಗಿ, ಅರೆಮನಸ್ಸಿನಿಂದ ಮತ್ತು ಯೋಜನೆಯಿಲ್ಲದೇ ಬಿಡಿಸಲಾರದು. ಇದಕ್ಕೆ ಪೂರ್ವಭಾವಿಯಾಗಿ ಜಗತ್ತಿನ ಜನಾಂಗ ಮತ್ತು ಸಂಸ್ಥೆಗಳು ಇದನ್ನು ಜಾಗತಿಕ ಹಾಗೂ ಜ್ವಲಂತ ಸಮಸ್ಯೆ ಯೆಂದು ಮನಗಾಣಬೇಕು.

## ೨. ಕಾರಣಗಳು

ಜಗತ್ತಿನಲ್ಲಿಯ ಹಿಂದುಳಿದ ದೇಶಗಳಲ್ಲಿಯ ದರಿದ್ರತನವೇ ಜನಸಂಖ್ಯೆ ಹೆಚ್ಚಳಕ್ಕೆ ಮೂಲ ಕಾರಣವಾಗಿದೆ. "ಮದುವೆ ಯಾಗದೆ ಮುಚ್ಚು ಬಿಡುವದಿಲ್ಲ. ಹುಚ್ಚು ಬಿಡದೆ ಮದುವೆ ಯಾಗುವದಿಲ್ಲ" ಎಂಬಂತೆ. ದಾರಿದ್ರ್ಯ ಹೋಗದೆ ಜನಸಂಖ್ಯೆ ಕಡಿಮೆಯಾಗುವದಿಲ್ಲ. ಜನಸಂಖ್ಯೆ ಕಡಿಮೆಯಾಗದೆ ದಾರಿದ್ರ್ಯ ಹೋಗುವದಿಲ್ಲ ಎಂಬುದೂ ಅಷ್ಟೇ ಸತ್ಯವಾಗಿದೆ. ವಿಹಾರ ಹಾಗೂ ಇತರ ಮನರಂಜನೆಗಳು ಸಿಗದ್ದರಿಂದ ಮಕ್ಕಳನ್ನು ಹಡೆ ಯುವದೊಂದೇ ಮನರಂಜನೆಯಾಗಿದೆ. ಶ್ರೀಮಂತರಿಗೆ ಮಕ್ಕಳು ಕಡಿಮೆ, ಬಡವರಿಗೆ ಮಕ್ಕಳು ಹೆಚ್ಚು ಎಂಬ ಪ್ರೀತಿಯು ಬರೀ ಕುಟುಂಬಗಳಿಗಷ್ಟೇ ಅಲ್ಲದೆ ದೇಶಗಳಿಗೂ ಅನ್ವಯಿಸುತ್ತದೆ. ಉದಾಹರಣೆ ಎಂದರೆ ಜಪಾನ ಮತ್ತು ಫ್ರಾನ್ಸ್‌ಗಳಲ್ಲಿ ಜನಸಂಖ್ಯೆ ಹೆಚ್ಚಳವು ಸ್ವಲ್ಪ, ಹೆಚ್ಚು ಕಡಿಮೆ ಶೂನ್ಯಮಟ್ಟಕ್ಕೆ ಇದಿದೆಂದು ಹೇಳ

ಬಹುದು. ಇದು ಬಡದೇಶಗಳಾದ. ಭಾರತ. ಪಾಕಿಸ್ತಾನ, ಇಂಡೋನೇಶಿಯಾ ಮುಂತಾದವುಗಳಲ್ಲಿ ತದ್ವಿರುದ್ಧವಾಗಿದೆ.

ಎರಡನೆಯದಾಗಿ ಅಜ್ಞಾನ ಹಾಗೂ ಮೂಢ ನಂಬಿಕೆಗಳೂ ಕಾರಣವೆನ್ನಬಹುದು. "ಇಗ್ನರನ್ಸ ಇಜ ಬ್ಲಿಸ್" ಎಂಬಂತೆ. ಅಜ್ಞಾನಿಗಳು ಏನೂ ವಿಚಾರಿಸದೆ ಹೊಣೆಗೇಡಿತನದಿಂದ ಮಕ್ಕಳನ್ನು ಪಡೆಯುತ್ತ ಹೋಗುತ್ತಾರೆ. ಭಾರತದಲ್ಲಿ ಮೂರರಲ್ಲಿ ಎರಡು ಪಾಲು ಜನರು ಇನ್ನೂ ನಿರಕ್ಷರಿಗಳಾಗಿಯೇ ಉಳಿದಿರುವರು. ಇದಕ್ಕೆ ದೈವವಾದ. ಹಳೆ ಸಂಪ್ರದಾಯಗಳು ಮತ್ತಷ್ಟು ಪುಟಕೊಡುತ್ತವೆ. "ಒಂದು ಹೊಟ್ಟೆಗೆ ಎರಡು ಕೈಗಳು ಇರುತ್ತವೆ". "ಹುಟ್ಟಿಸಿದ ದೇವರು ಹುಲ್ಲು ತಿನ್ನಿಸುತ್ತಾನೆಯೆ ?" ಮುಂತಾದ ಉಕ್ತಿಗಳು ಜನಸಮಾನ್ಯರಲ್ಲಿ ಪ್ರಚುರಿತಗೊಂಡಿವೆ. ಹೆಚ್ಚು ಮಕ್ಕಳಿದ್ದಷ್ಟು ಮನೆ ಚೆಂದ. ಎಲ್ಲವೂ ದೇವರ ಇಚ್ಛೆ ಎಂಬ ಭಾವನೆ ಬೇರೂರಿದೆ. ಒಟ್ಟಿನ ಮೇಲೆ ನಾವು 'ದರಿದ್ರ ನಾರಾಯಣ' ವಾದದಲ್ಲಿ ನಂಬಿಕೆಯುಳ್ಳವರು.

ಮೂರನೆಯದಾಗಿ ಭಾರತ ಮತ್ತು ಕೆಲ ದೇಶಗಳಲ್ಲಿ ಬೇಗ ವಿವಾಹ ಮತ್ತು ಶಿಶುವಿವಾಹಗಳೂ ನಡೆಯುತ್ತವೆ. ೪೦ನೇ ವಯುಸ್ಸಿನಲ್ಲಿ 'ಅಜ್ಜ' ಅಥವಾ 'ಅಜ್ಜಿ'ಯಾಗುವದು ಅತಿ ಸಾಮಾನ್ಯ. ನಮ್ಮ ದೇಶದಲ್ಲಿ ಶಾರದಾ ಕಾಯಿದೆ ಬಂದಿದ್ದರೂ. 'ತೊಟ್ಟಿಲ ಬಾಸಿಂಗ'ಗಳು ಇನ್ನೂ ತಪ್ಪಿಲ್ಲ ! ಇದರಿಂದ ಜನನದ ಅವಧಿಯು ಹೆಚ್ಚಾಗಿ. ಮನೆತುಂಬ ಮಕ್ಕಳಾಗಿಬಿಡುತ್ತವೆ. ನಮ್ಮಲ್ಲಿ ೨೦ನೇ ವಯುಸ್ಸಿನಲ್ಲಿ ಹೆಚ್ಚಾಗಿ ಎಲ್ಲರೂ 'ಮಕ್ಕಳ

ಗಿರಣಿಗಳ ಮಾಲಕರಾಗಿಬಿಡುತ್ತಾರೆ. ಆದರೆ. ಪಾಶ್ಚಾತ್ಯ ದೇಶಗಳಲ್ಲಿ ೩೦ನೇ ವಯಸ್ಸಿನಲ್ಲಿ ಕೂಡ 'ನನ್ನ ಕೂಸಿನ ಲಗ್ನ ಇಷ್ಟು ಬೇಗ ಮಾಡುವದೆ ?' ಎಂದು ಅವರ ತಂದೆ ತಾಯಿಗಳು ಪ್ರಶ್ನೆ ಕೇಳುತ್ತಾರೆ. ರಶಿಯಾದಲ್ಲಿ ಕೂಡ ಇತ್ತೀಚೆಗೆ ಬ್ರಹ್ಮಚಾರಿಗಳ ಸಂಖ್ಯೆ ಬೆಳೆಯುತ್ತಿದೆ. ಆದರೆ ನಮ್ಮ ದೇಶದಲ್ಲಿ ಬ್ರಹ್ಮಚಾರಿಗಳು ಅತಿಕಡಿಮೆ, ಯಾಕಂದರೆ ಅವರಿಗೆ 'ಮೋಕ್ಷ' ಸಿಗುವದಿಲ್ಲವಂತೆ. ಕೆಲವರು 'ಬ್ರಹ್ಮಚಾರಿ'ಗಳಿದ್ದರೂ ಅವರಿಗೂ ಅಪ್ರತ್ಯಕ್ಷವಾಗಿ ಮಕ್ಕಳುಂಟು ! ಮೇಲಾಗಿ ನಮ್ಮಲ್ಲಿ ಮುಸ್ಲಿಂ ವಿವಾಹ ಕಾಯ್ದೆಯು ಬಹುಪತ್ನಿತ್ವವನ್ನು ಮನ್ನಿಸಿದೆ. ಎಂದಮೇಲೆ ಡಜನ್‌ಗಟ್ಟಲೆ ಮಕ್ಕಳಾಗದೆ ಬಿಟ್ಟಾವೆ ? ಗುಡಿಯ ಮೇಲೆ ಕಳಸವಿಟ್ಟಂತೆ 'ಅಷ್ಟಪುತ್ರ ಭಾಗ್ಯವತಿಯಾಗು' ಎಂದು ನಮ್ಮ ಆಚಾರ್ಯರು ಲಗ್ನದ ಮಂಟಪದಲ್ಲಿಯೇ ಆ ಬಡ ತರುಣಿಗೆ ಆಶೀರ್ವದಿಸುವದು ಅಥವಾ ಅಪ್ಪಣೆ ಕೊಡಿಸುವದು ರೂಢಿಯಾಗಿಬಿಟ್ಟಿದೆ.

ನಾಲ್ಕನೆಯದಾಗಿ. ಜಗತ್ತಿನಾದ್ಯಂತ ಅದರಲ್ಲಿಯೂ ಬಡ ದೇಶಗಳಲ್ಲಿ, ಪ್ಲೇಗ, ಕಾಲರಾ. ಮೈಲಿಬೇನೆ. ಮಲೇರಿಯಾ, ಇನ್‌ಫ್ಲೂಯೆಂಝಾ, ನ್ಯುಮೋನಿಯಾ, ಕ್ಷಯ ಹಾಗೂ ಮಹಾರೋಗದಂಥ ಸಾಂಕ್ರಾಮಿಕ ಹಾಗೂ ಸಂಕರೋಗಗಳನ್ನು ಉಚ್ಚಾಟನೆಗೊಳಿಸಲಾಗುತ್ತಿದೆ. ಆಧುನಿಕ ಸಂಶೋಧನೆಗಳು, ದಿವ್ಯ ಔಷಧಗಳು ಹಾಗೂ ಸರಕಾರದ ನೈರ್ಮಲ್ಯ ಕ್ರಮಗಳು ಎಷ್ಟೋ ಸಾವುಗಳನ್ನು ತಪ್ಪಿಸಿದ್ದಲ್ಲದೆ, ಜನರ ಆಯುರ್ಮಾನವನ್ನೂ ಹೆಚ್ಚಿಸಿವೆ. ಉದಾಹರಣಾರ್ಥವಾಗಿ ಭಾರತದಲ್ಲಿ ಮರಣದ ಪ್ರಮಾಣವು ಪ್ರತಿ ಸಾವಿರಕ್ಕೆ ೧೮ ಇದ್ದದ್ದು ಈಗ ೧೫ಕ್ಕೆ ಇಳಿದಿದೆ. ಇದು ಇತ್ತೀ

ಚಿನ ವರ್ಷಗಳ ಸರಾಸರಿಯಾಗಿದೆ. ನಮ್ಮ ಸರಾಸರಿ ವಯೋಮಾನವು ೧೯೪೧ರಲ್ಲಿ ೨೯ ವರ್ಷ ಇದ್ದದ್ದು ಈಗ ಅದು ೫೦ ವರ್ಷಗಳಿಗೇರಿದೆ. ಜನನ ಪ್ರಮಾಣಕ್ಕಿಂತ ಮರಣ ಪ್ರಮಾಣವು ಹೆಚ್ಚಿಗೆ ತಗ್ಗಿದ್ದರಿಂದ. ಜನಸಂಖ್ಯೆಯು ಏರುತ್ತ ನಡೆದಿರುವದು ಸ್ವಾಭಾವಿಕ.

ಐದನೆಯದಾಗಿ ಆಫ್ರಿಕ ಮತ್ತು ಏಶಿಯಾಗಳಲ್ಲಿ ಹೆಚ್ಚಾಗಿ ಉಷ್ಣ ಹವಾಮಾನವಿರುವದರಿಂದ. ಸಂತಾನೋತ್ಪತ್ತಿಯ ಅರ್ಹತೆ ಮತ್ತು ಫಲವತ್ತತೆಯು ಹೆಚ್ಚುವದಲ್ಲದೇ. ಅದು ಸ್ತ್ರೀಪುರುಷರಲ್ಲಿ ಯುರೋಪಿನ ತಂಪುಹವೆಯ ದೇಶಗಳ ಜನರಲ್ಲಿಯಕಿಂತ ಬೇಗನೆ ಅಂದರೆ ವಯಸ್ಸಿನ ೧೭ನೇ ವರ್ಷದಲ್ಲಿಯೇ ಆರಂಭವಾಗುತ್ತದೆ. ಸಂತಾನೋತ್ಪತ್ತಿಯ ಒಟ್ಟು ಅವಧಿ ಹೆಚ್ಚುವದರಿಂದ. ಹೆಚ್ಚು ಮಕ್ಕಳಾಗುವದುಂಟು. ಇದು ಶಾಸ್ತ್ರೀಯವಾಗಿ ಸಿದ್ಧವಾದ ಮಾತು.

ಆರನೆಯದಾಗಿ ಬಡದೇಶಗಳಲ್ಲಿಯ ಜನರ ಆಹಾರವು ಸಾಮಾನ್ಯವಾದದ್ದಿದ್ದು ಅದು ಸಂತಾನೋತ್ಪತ್ತಿಗೆ ಬಹಳ ಅನುಕೂಲವಾದದ್ದೆಂದು ಕಂಡುಬಂದಿದೆ. ಶ್ರೀಮಂತ ದೇಶಗಳಲ್ಲಿಯ ಜನರ ಆಹಾರವು ಉತ್ಕೃಷ್ಟವಾಗಿದ್ದು. ಅದು ಆರೋಗ್ಯಕ್ಕೇನೊ ಪೋಷಕವಾದದ್ದು. ಆದರೆ ಶ್ರೀಮಂತ ಆಹಾರದಿಂದ ಸಂತಾನೋತ್ಪತ್ತಿಯ ಗುಣ ಅಥವಾ ಸಾಮರ್ಥ್ಯವು ಕಡಿಮೆಯಾಗುವದೆಂದೂ ಅನುಭವಸಿದ್ಧವಾದ ಮಾತು. ಅಂತೆಯೇ. ಬಡದೇಶಗಳು ಪ್ರಜೋತ್ಪಾದನೆಯಲ್ಲಿ ಮುಂದಾಳುಗಳಾಗಿವೆ.

ಏಳನೆಯದಾಗಿ. ಕತ್ತಲೆಗೂ ಸ್ತ್ರೀಯರ ಗರ್ಭಧಾರಣೆಗೂ ಸಂಬಂಧವಿದೆಯೆಂದು ಶಂಕಿಸಲಾಗಿದೆ. ಅಮೇರಿಕ ಒಂದು ಪ್ರಾಂತ

ದಲ್ಲಿ ಕೆಲ ವರ್ಷಗಳ ಹಿಂದೆ ವಿದ್ಯುಚ್ಛಕ್ತಿಯು ಹಠಾತ್ತಾಗಿಯೇ ಇಡೀ ದಿನ ನಿಂತುಹೋಯಿತು. ಇದೇನೂ ಆಶ್ಚರ್ಯವಲ್ಲ. ಆದರೆ ಮೋಜೆಂದರೆ. ಅಂದಿಗೆ ಸರಿಯಾಗಿ ೯ ತಿಂಗಳ ಅನಂತರ ಕೆಲ ನಗರಗಳಲ್ಲಿಯ ಹೆರಿಗೆ ಆಸ್ಪತ್ರೆಗಳೆಲ್ಲವೂ 'ಹೌಸ್‌ಫುಲ್' ಆಗಿದ್ದವಂತೆ ! ಭಾರತದಲ್ಲಿ ಪಟ್ಟಣ ಮತ್ತು ನಗರಗಳಲ್ಲಿಯಕ್ಕಿಂತ ಹಳ್ಳಿಗಳಲ್ಲಿಯೇ ಜನನ ಪ್ರಮಾಣ ಹೆಚ್ಚೆಂಬುದು ನಿರ್ವಿವಾದ ಸಂಗತಿ. ಭಾರತದಲ್ಲಿ ಸುಮಾರು ೪/೫ ಅಂದರೆ ನಾಲ್ಕು ಲಕ್ಷದಷ್ಟು ಹಳ್ಳಿಗಳಲ್ಲಿ ವಿದ್ಯುಚ್ಛಕ್ತಿಯು ಇನ್ನೂ ಪ್ರವೇಶಿಸಿಲ್ಲ. ಅವು ರಾತ್ರಿಯೆಲ್ಲಾ ಸ್ವಲ್ಪ ಹೆಚ್ಚುಕಡಿಮೆ ಅಂಧಕಾರದಲ್ಲಿಯೇ ಮುಳುಗಿರುತ್ತವೆ. ಆದ್ದರಿಂದ ತರ್ಕಬದ್ಧವಾಗಿ ನಮ್ಮಲ್ಲಿಯ ಜನಸಂಖ್ಯಾ ಸ್ಫೋಟಕ್ಕೆ ಇಂಥ ಹಳ್ಳಿಗಳದೇ ಸಿಂಹಪಾಲು ಇರಬಹುದೆ ? ಈಗಿನ ವಿದ್ಯುಚ್ಛಕ್ತಿಯ ಬರಗಾಲದಿಂದ ಈ ಪಿಡುಗೂ ಪಟ್ಟಣ ಮತ್ತು ನಗರಗಳಿಗೂ ಹಬ್ಬಬಹುದೆ ?

ಕೊನೆಯದಾಗಿ ಅತಿ ಮಹತ್ವದ್ದೆಂದರೆ. ಕುಟುಂಬ ಯೋಜನೆಯನ್ನು ಶ್ರೀಮಂತ ಪಾಶ್ಚಾತ್ಯ ರಾಷ್ಟ್ರಗಳೇ ಪ್ರಥಮವಾಗಿ ಹಾಗೂ ಗಂಭೀರವಾಗಿ ಪಾಲಿಸುತ್ತ ಬಂದಿವೆ. ಅವು ಮಾಲ್ಥಸ್‌ನ ಸೂಚನೆಗಳಾದ ಬ್ರಹ್ಮಚರ್ಯೆ. ತಡವಾಗಿ ವಿವಾಹವಾಗುವದು ಮತ್ತು ಕುಟುಂಬ ಯೋಜನೆಗಳನ್ನು ಸರ್ವಥಾ ಪಾಲಿಸುತ್ತ ಬಂದಿವೆ. ಅಂತೆಯೇ ಅಲ್ಲಿಯ ಜನಸಂಖ್ಯೆಯು ಹತೋಟಿಯಲ್ಲಿರುವದು. ಆದರೆ ಹಿಂದುಳಿದ ದೇಶಗಳಲ್ಲಿ ಆ ಸೂಚನೆಗಳನ್ನು ಗಾಳಿಗೆ ತೂರಲಾಗಿದೆ. ಇಂಥ ದೇಶಗಳಲ್ಲಿ ಭಾರತವೇ ಪ್ರಥಮವಾಗಿ ಕುಟುಂಬ ಯೋಜನೆಯನ್ನು ಸ್ವಾತಂತ್ರ್ಯಾನಂತರ ಜಾರಿಗೆ ತರಲು

ಪ್ರಯತ್ನಿಸಲಾರಂಭಿಸಿತು. ಆದರೆ ಮೊದಲನೆ ಪಂಚವಾರ್ಷಿಕ ಯೋಜನೆಯು ಕೊನೆಯತನಕ ಅಂದರೆ ೧೯೫೭–೧೯೫೬ರ ಅವಧಿ ಯಲ್ಲಿ ಪ್ರಗತಿಯು ಅತ್ಯಲ್ಪವಾಗಿತ್ತು. ಎರಡು, ಮೂರು ಮತ್ತು ನಾಲ್ಕನೇ ಪಂಚವಾರ್ಷಿಕ ಯೋಜನೆಗಳಲ್ಲಿ ತಕ್ಕಮಟ್ಟಿಗೆ ಅದೂ ನಗರ ಪ್ರದೇಶಗಳಲ್ಲಿ ಪ್ರಗತಿಯಾಗಿದೆ. ಆದರೆ ಗ್ರಾಮೀಣ ಪ್ರದೇಶ ಗಳಲ್ಲಿ ಕುಟುಂಬ ಯೋಜನೆಯು ಬಹುಮಟ್ಟಿಗೆ ವಿಫಲವಾಗಿದೆ. ನಮ್ಮ ದೇಶದಲ್ಲಿ ಸುಮಾರು ೫೦೦೦ ಕುಟುಂಬ ಯೋಜನಾ ಅಥವಾ ಪ್ರಾಥಮಿಕ ಆರೋಗ್ಯ ಕೇಂದ್ರಗಳಿದ್ದರೂ ಸಾಕಷ್ಟು ಸಿಬ್ಬಂದಿ, ಹಣ ಮತ್ತು ಆವಶ್ಯಕ ಸಾಧನಗಳಿಲ್ಲದ್ದರಿಂದ ಅವು ನಿಷ್ಕ್ರಿಯವಾಗಿವೆ. ಅವು ಜನರನ್ನು ಆಕರ್ಷಿಸುವದರಲ್ಲಿ ವಿಫಲ ವಾಗಿವೆ.

ಗರ್ಭನಿರೋಧಕ ಗುಳಿಗೆಗಳು ಮತ್ತು ವಂಕಿಗಳ ನಡುವಿನ ವಾದವಿವಾದ, ಶಸ್ತ್ರಚಿಕಿತ್ಸೆಯ ಬಗ್ಗೆ ಜನರಿಗಿರುವ ತಪ್ಪು ತಿಳು ವಳಿಕೆಗಳು, ಪ್ರಚಾರದ ಅಭಾವ ಮತ್ತು ಜನತೆಯಲ್ಲಿರುವ ಅನಾ ಸಕ್ತಿಗಳು ಕುಟುಂಬ ಯೋಜನೆಗೆ ತೊಡಕಾಗಿವೆ. ಮೇಲಾಗಿ, ಜಾತ್ಯಾಂಧರು, ಪಟ್ಟಭದ್ರ ಹಿತಾಸಕ್ತಿಗಳು ಮತ್ತು ಜಗದ್ಗುರು ಗಳು, ಪಾದ್ರಿಗಳು ಮತ್ತು ಮೌಲಾನಾಗಳಂಥ ಧರ್ಮಗುರುಗಳು ಕುಟುಂಬ ಯೋಜನೆಯೆಂದರೆ, ಪಾಪಕೃತ್ಯ, ದೇವರಿಗೆ ದ್ರೋಹ ಮುಂತಾಗಿ ಅಪಪ್ರಚಾರವ ಎತ್ತುಗಡೆ ನಡೆಸಿದ್ದಾರೆ.

ಪಾಕಿಸ್ತಾನ ಮುಂತಾದ ಮುಸ್ಲಿಂ ರಾಷ್ಟ್ರಗಳಲ್ಲಿಯಂತೂ ಕುಟುಂಬ ಯೋಜನೆಯ ಸದ್ದೇ ಕೇಳಿಬರದಿರುವದು ನಿಜ

ವಾಗಿಯೂ ದುರ್ದೈವದ ಸಂಗತಿಯೇ ಸರಿ. ಇಂಡೋನೇಶಿಯಾ ಮತ್ತು ಬಂಗ್ಲಾದೇಶಗಳಲ್ಲಿಯೂ ಇದರ ಸುಳಿವಿದ್ದಂತೆ ಕಾಣಲಿಲ್ಲ. ಕಮ್ಯುನಿಷ್ಟ ದೇಶಗಳಾದ ಚೀನ, ಉತ್ತರ ಕೋರಿಯಾ ಮತ್ತು ಉತ್ತರ ವ್ಹಿಯಟ್ನಾಮಗಳಲ್ಲಿ ಸಾಕಷ್ಟು ಜನಸಂಖ್ಯಾ ಮತ್ತು ಆಹಾರ ಸಮಸ್ಯೆಯಿದ್ದರೂ, ಅಲ್ಲಿಯ ಸರಕಾರಗಳು ಇಲ್ಲಿಯ ವರೆಗೆ, ವಿರೋಧ, ಉದಾಸೀನತೆ ಮತ್ತು ಮೌನವನ್ನು ತಾಳಿದ್ದವು. ಈ ದೇಶಗಳಲ್ಲಿ ಕಮ್ಯುನಿಜಂ ಬಂದರೆ ಎಲ್ಲ ಸಮಸ್ಯೆಗಳೂ ತಾವಾಗಿಯೇ ಬಗೆಹರಿಯುವವು ಮತ್ತು ಸಮತಾವಾದದಲ್ಲಿ ಜನಸಂಖ್ಯಾ ನಿಯಂತ್ರಣ ಆವಶ್ಯಕತೆ ಇಲ್ಲ ಎಂಬ ತಪ್ಪು ನಂಬಿಕೆ ಇತ್ತು. ಆದರೆ ಇತ್ತೀಚೆಗೆ ಭ್ರಮೆನಿರಸನವಾಗಿದ್ದು ಚೀನವು ಈಗೀಗ ಕುಟುಂಬ ಯೋಜನೆಯನ್ನು ಕೈಕೊಂಡಿದೆ. ಇದು ಅತಿ ತಡವಾಯಿತು. ನಮ್ಮ ದೇಶದಲ್ಲಿ ಹೇರಳವಾಗಿ ಹಣ ಖರ್ಚು ಮಾಡುತ್ತಿದ್ದರೂ, ಜನರಲ್ಲಿಯ ಅನಕ್ಷರತೆ, ಅಜ್ಞಾನ, ಅಶಿಸ್ತು ಮುಂತಾದವುಗಳು ಯೋಜನೆಯ ಸಫಲತೆಗೆ ಮಾರಕವಾಗಿವೆ.

## ೩. ಜನಸಂಖ್ಯಾ ಸ್ಫೋಟದ ಪರಿಣಾಮಗಳು

ಆಹಾರ ಸಮಸ್ಯೆಯು ಪ್ರಪ್ರಥಮ ಪರಿಣಾಮವಾಗಿದೆ. ಮಾಲ್ಥಸ್‌ನು ಹೇಳಿದಂತೆ ಜನಸಂಖ್ಯಾ ಹೆಚ್ಚಳದ ವೇಗದಲ್ಲಿ ಆಹಾರಧಾನ್ಯಗಳ ಉತ್ಪಾದನೆಯು ಆಗುತ್ತಿಲ್ಲ. ಇದರಿಂದ ಭಾರತ, ಪಾಕಿಸ್ತಾನ, ಬಂಗ್ಲಾದೇಶ, ಇಂಡೋನೇಶಿಯಾ, ಕಮ್ಯು

ನಿಷ್ಟ ಚೀನ ಮೊದಲಾದ ದೇಶಗಳಲ್ಲಿ ಭೀಕರವಾದ ಬರಗಾಲವು ಆಗಾಗ್ಗೆ ತಲೆಯೆತ್ತುತ್ತಲೇ ಇದೆ. ಗಂಭೀರವಾದ ಆಹಾರ ಕೊರತೆ. ಆಹಾರಧಾನ್ಯಗಳ ಬೆಲೆಯೇರಿಕೆ. ಆಹಾರ ಕಲಬೆರಕೆ. ಕಳ್ಳಸಂಗ್ರಹ. ಕಳ್ಳಸಾಗಾಟ ಮತ್ತು ಕಳ್ಳಪೇಟೆಗಳು ಸರಕಾರಕ್ಕೂ ಮತ್ತು ಜನತೆಗೆ ಒಂದು ತಲೆಶೂಲೆಯಾಗಿ ಪರಿಣಮಿಸಿವೆ. ಹಸಿವಿನಿಂದ ಸಾವು. ಅರೆಹಸಿವು ಮುಂತಾದವುಗಳನ್ನು ನೆನೆದರೆ ಕರುಳು ಕತ್ತರಿಸುತ್ತದೆ. ಭಾರತದಲ್ಲಿ ಅದೆಷ್ಟೋ ಜನ ಹಸಿವು ತಾಳಲಾರದೆ ಆತ್ಮಹತ್ಯೆ ಮಾಡಿಕೊಂಡಿಲ್ಲ ? ಅಂತರಾಷ್ಟ್ರೀಯ ಆಹಾರ ಸಂಸ್ಥೆಯ ಅಂದಾಜಿನಂತೆ. ಜಗತ್ತಿನಲ್ಲಿ ಪ್ರತಿಶತ ೭೫ರಷ್ಟು ಜನ ಅರೆಹೊಟ್ಟೆ ಊಟ ಮಾಡುತ್ತಾರಂತೆ. ಸದ್ಯ ೨ ಕೋಟಿ ಜನ ಆಹಾರವಿಲ್ಲದೆ ಸಾವಿನ ದವಡೆಯಲ್ಲಿ ಸಿಲುಕಿರುವರಂತೆ. ಕೆಲವು ವರ್ಷಗಳ ಹಿಂದೆ ಕಮ್ಯುನಿಷ್ಟ ಚೀನದಲ್ಲಿ ಜನರು ಪಕ್ಷಿಗಳನ್ನು ಮತ್ತು ಹುಲ್ಲನ್ನು ತಿಂದು ಜೀವಿಸಬೇಕಾಯಿತು. ಭಾರತದಲ್ಲಿಯೂ ೧೯೭೨ರ ಬರಗಾಲದ ವೇಳೆಯಲ್ಲಿ ಬಿಹಾರ ಪ್ರಾಂತದಲ್ಲಿ ಎಷ್ಟೋ ಜನರು ಗಡ್ಡೆ. ಗೆಣಸು. ಬೇರುಗಳನ್ನು ತಿಂದು ಜೀವಿಸಿದರು.

೧೯೭೧ರಲ್ಲಿ ಜಾಗತಿಕ ಆಹಾರ ಉತ್ಪಾದನೆಯು ಪ್ರತಿಶತ ೩ರಷ್ಟು ಹೆಚ್ಚಾಗಿ. ಉಳಿದ ರಾಷ್ಟ್ರಗಳಲ್ಲಿಯ ಆಹಾರಧಾನ್ಯಗಳ ಕಣಜಗಳು ತುಂಬಿದ್ದವು. ಆದರೆ ೧೯೭೪ರ ಹೊತ್ತಿಗೆ ಶ್ರೀಮಂತ ರಾಷ್ಟ್ರಗಳಲ್ಲಿಯೂ ಕೂಡ ಈ ಕಣಜಗಳು ಬರಿದಾದವು. ಕೆಲವು ವರ್ಷಗಳಿಂದ ರಶಿಯವು ಕೂಡ ತನ್ನಲ್ಲಿಯ ಬಂಗಾರವನ್ನು ಕೊಟ್ಟು ಅಮೇರಿಕ ಮುಂತಾದ ದೇಶಗಳಿಂದ ದೊಡ್ಡ ಪ್ರಮಾಣದಲ್ಲಿ ಆಹಾರ ಧಾನ್ಯವನ್ನು ಕೊಂಡುಕೊಂಡಿರುವದು. ಇದರ ಪರಿಣಾಮವಾಗಿ

ಜಾಗತಿಕ ಮಾರುಕಟ್ಟೆಗಳಲ್ಲಿ ಸಂಗ್ರಹವೇ ಇಲ್ಲದಂತಾಗಿ ಬೆಲೆಗಳು ಪುಟಿದೆದ್ದಿವೆ. ಡಾ. ನಾರ್ಮನ್. ಇ. ಬೋರ್ಲೋಗರ ಪ್ರಕಾರ ಕಳೆದ ೧೮ ತಿಂಗಳುಗಳಲ್ಲಿ ಅಂತರ್ರಾಷ್ಟ್ರೀಯ ಆಹಾರ ಬೆಲೆಗಳು ಪ್ರತಿಶತ ೩೦೦ರಷ್ಟು ಏರಿರುವವು. ಉದಾಹರಣೆಗೆ ೧೯೭೨ರ ಜುಲೈಯಲ್ಲಿ ಒಂದು ಟನ್ ಗೋದಿಯ ಬೆಲೆ ೬೬ ಡಾಲರ ಇದ್ದದ್ದು ೧೯೭೪ರ ಜನೆವರಿಯಲ್ಲಿ ೨೩೧ ಡಾಲರುಗಳಿಗೆ ನೆಗೆಯಿತು. ಇತ್ತೀಚೆಗೆ ಇಂಡೋನೇಶಿಯವು ಈಜಿಪ್ತದಿಂದ ೪೩೧ ಡಾಲರಿಗೆ ೧ ಟನ್ನಿನಂತೆ. ೨೫೦೦೦ ಟನ್ ಅಕ್ಕಿಯನ್ನು ಖರೀದಿಸಿತಂತೆ!

ಭಾರತವೂ ಕಳೆದ ವರ್ಷ ೨ ದಶಲಕ್ಷ ಟನ್ ಆಹಾರಧಾನ್ಯವನ್ನು ಹೆಚ್ಚಿನ ಬೆಲೆಯನ್ನು ತೆತ್ತು ಕೊಂಡುಕೊಳ್ಳಲು ಬಹಳ ಪ್ರಯಾಸ ಪಡಬೇಕಾಯಿತು. ನಮ್ಮಲ್ಲಿ ವರ್ಷಕ್ಕೆ ೧೦-೧೧ ಕೋಟಿ ಟನ್ ಆಹಾರಧಾನ್ಯ ಉತ್ಪಾದನೆಯಾಗುತ್ತಿದ್ದು ೨-೩ ಕೋಟಿ ಟನ್‌ಗಳಷ್ಟನ್ನು ಆಮದು ಮಾಡಿಕೊಳ್ಳಬೇಕಾಗುತ್ತದೆ. ಪ್ರತಿ ಯುವಕನಿಗೆ ದಿನಕ್ಕೆ ೧೬ ಔಂಸ ಸಹ ಆಹಾರ ದೊರೆಯುತ್ತಿಲ್ಲ. ತಲಾ ೬ ಔಂಸ ಹಾಲು ಕೂಡ ಸಿಗುತ್ತಿಲ್ಲ. ಇಂಗ್ಲಂಡದಲ್ಲಿ ವಾರಕ್ಕೆ ತಲಾ ೫ ಮೊಟ್ಟೆಗಳು ದೊರೆಯುತ್ತಿದ್ದರೆ. ಭಾರತದಲ್ಲಿ ೫ ವಾರಕ್ಕೆ ಒಂದು ಮೊಟ್ಟೆ ಬೀಳುತ್ತದೆ! ಕಳೆದ ೧೦ ವರ್ಷಗಳಲ್ಲಿ ನಮ್ಮ ದೇಶದಲ್ಲಿ ಆಹಾರ ಜೀನಸುಗಳ ಬೆಲೆಗಳು ೩-೪ ಪಟ್ಟು ಏರಿರುವವು. ನೋಡಿದಲ್ಲೆಲ್ಲ ಆಹಾರದ ಬಗ್ಗೆ ಹಾಹಾಕಾರ ಕಂಡುಬರುತ್ತದೆ.

ಬಡತನೆಯಿಂದಾಗಿ ಬಟ್ಟೆಬರೆ ಮತ್ತು ವಸತಿ ಸಮಸ್ಯೆಯೂ ತೀವ್ರವಾಗಿದೆ. ಭಾರತೀಯನಿಗೆ ವರ್ಷಂಪ್ರತಿ ಕೇವಲ ೧೫ ಮೀಟರ

ಗಳಷ್ಟು ಬಟ್ಟೆ ಸಿಗುತ್ತದೆ. ಎಷ್ಟೋ ಜನರು ಅರೆಬತ್ತಲೆಯಿಂದಿರುವರು. ಇದರಿಂದ ಅಮೇರಿಕನ್ನರು ನಮಗೆ 'ಹಾಫ್ ನೇಕೆಡ್ ಫಕೀರ್ಸ್' ಎಂದು ಗೇಲಿ ಮಾಡುವಂತಾಗಿದೆ. ನಮ್ಮಲ್ಲಿ ವಸತಿಯ ಪರಿಸ್ಥಿತಿಯು ಶೋಚನೀಯವಾಗಿದೆ. ಸರಾಸರಿ ೫ ಜನರ ಕುಟುಂಬವೊಂದಕ್ಕೆ ೧ ಮನೆಯಂತೆ ಲೆಕ್ಕಹಾಕಿದರೆ ೫೬ ಕೋಟಿ ಜನರಿಗೆ ೧೧ ಕೋಟಿ ಮನೆಗಳಾದರೂ ಬೇಡವೆ? ಆದರೆ ಭಾರತದಲ್ಲಿರುವದು ಸುಮಾರು ೭ ಕೋಟಿ ಮನೆಗಳು ಮಾತ್ರ. ಹೀಗಾಗಿ ಪಟ್ಟಣಗಳಲ್ಲಿ ೧-೨ ಖೋಲಿಯ ಮನೆಗಳಲ್ಲಿ ೮-೧೦ ಜನ ವಾಸಿಸುವ ಪ್ರಸಂಗ ಬಂದಿದೆ. ಮುಂಬಯಿ, ಕಲಕತ್ತಾಗಳಂಥ ಮಹಾನಗರಗಳಲ್ಲಿ ಲಕ್ಷೋಪಲಕ್ಷ ಜನರು ರೇಲ್ವೆ ಪ್ಲ್ಯಾಟಫಾರ್ಮ, ಬಸ್‌ನಿಲ್ದಾಣ, ಮತ್ತು ಫುಟಪಾಥ್‌ಗಳಲ್ಲಿ ರಾತ್ರಿ ಮಲಗುತ್ತಾರೆ. ವಿಪರೀತ ಮನೆ ಭಾಡಿಗೆ 'ಪಗಡಿ' ಪದ್ಧತಿಗಳು ಸಹಿತ ಜನಸಂಖ್ಯೆ ಹೆಚ್ಚಳದ ಪರಿಣಾಮವೇ ಆಗಿದೆ. ನಗರಗಳಲ್ಲಿ ಎಷ್ಟೋ ಜನರು ಕೊಳಚೆ ಪ್ರದೇಶಗಳಲ್ಲಿ ವಾಸಿಸುತ್ತಾರೆ. ಉದಾಹರಣೆಗೆ ಪುಣೆ ನಗರದಲ್ಲಿ ಪ್ರತಿಶತ ೧೫ರಷ್ಟು ಜನರು ಕೊಳಚೆ ಪ್ರದೇಶ ನಿವಾಸಿಗಳಾಗಿದ್ದಾರೆ. ಇದು ಅಂಥ ಜನರ ಮತ್ತು ಸಾರ್ವಜನಿಕರ ಆರೋಗ್ಯಕ್ಕೆ ಅಪಾಯಕಾರಿಯಾಗಿದೆ. ಮನೆ ಮಾಲಕರಿಂದ ಭಾಡಿಗೆದಾರರ ಶೋಷಣೆಯಂತೂ ಹೇಳಲಸದಳವಾಗಿದೆ.

ಮೂರನೆಯದಾಗಿ ಬಡತನದ ಮೂಲಕ ರೋಗರುಜಿನಗಳ ಚಿತ್ರವೂ ಭಯಾನಕವಾಗಿದೆ. ಒಂದು ಸಮೀಕ್ಷೆಯ ಪ್ರಕಾರ ಭಾರತದಲ್ಲಿ ಸುಮಾರು ೫೦ ಲಕ್ಷ ಕ್ಷಯ ರೋಗಿಗಳು. ೨೦ ಲಕ್ಷ ಮಹಾರೋಗಿಗಳು. ೪೫ ಲಕ್ಷ ಕುರುಡ ಹಾಗೂ ಅರೆಕುರುಡರು

ಪ್ರತಿಶತ ೧.೫ರಷ್ಟು ಸಿಹಿಮೂತ್ರ ರೋಗಿಗಳು ಇರುವರು. ಮೈಲಿಬೇನೆ, ಕಾಲರಾ, ಮಲೇರಿಯಾ ಇನ್‌ಫ್ಲೂಯೆಂಝಾಗಳು ಕೂಡ ತಾಂಡವವಾಡುತ್ತಿವೆ. ಇವೆಲ್ಲ ಜನಸಂಖ್ಯೆಯ ಹೆಚ್ಚಳ, ಸಾರ್ವಜನಿಕ ನೈರ್ಮಲ್ಯದ ಅಭಾವ, ಡಾಕ್ಟರರ ಕೊರತೆ. ನಿಕೃಷ್ಟವಾದ ಆಹಾರಗಳ ಪರಿಣಾಮವಾಗಿವೆ. ಇದರಿಂದ ನಮ್ಮ ಸರಾಸರಿ ಆಯುರ್ಮಾನವು ಸ್ತ್ರೀಯರ ವಿಷಯದಲ್ಲಿ ೪೩ ಮತ್ತು ಪುರುಷರ ವಿಷಯದಲ್ಲಿ ೪೯ರಷ್ಟಿರುವದೆಂದು ಇತ್ತೀಚೆಗೆ ನಮ್ಮ ಕೇಂದ್ರ ಸರಕಾರದ ಆರೋಗ್ಯ ಮಂತ್ರಿಗಳು ತಿಳಿಸಿರುವರು. ಆದರೆ ಮುಂದುವರಿದ ಆಸ್ಟ್ರೇಲಿಯಾ, ಅಮೇರಿಕಾ. ಕೆನಡಾ ಮತ್ತು ರಶಿಯಾಗಳಲ್ಲಿ ಪುರುಷರ ಸರಾಸರಿ ಆಯುರ್ಮಾನವು ೬೫ರಿಂದ ೭೦ ವರ್ಷ ಇದ್ದರೆ. ಸ್ತ್ರೀಯರದು ೭೦ರಿಂದ ೭೫ ವರ್ಷ ಇರುವದು. ನಮ್ಮಲ್ಲಿ ಶತಾಯುಷಿಗಳ ಸಂಖ್ಯೆ ತೀರ ಕಡಿಮೆ. ರಶಿಯಾದಲ್ಲಿ ಜಾರ್ಜಿಯಾ ಮುಂತಾದ ಕೆಲ ಪ್ರಾಂತಗಳಲ್ಲಿ ೯೦೦೦ಕ್ಕೂ ಮಿಕ್ಕಿ ಶತಾಯುಷಿಗಳಿದ್ದಾರಂತೆ. ಜಗತ್ತಿನಲ್ಲಿಯೇ ಅತಿ ದೀರ್ಘಾಯುಷಿಯಾದ ರಶಿಯಾದ ೧೬೪ ವರ್ಷ ವಯಸ್ಸಿನ ಶಿರಾಲಿ ಮುಸ್ಲಿಮೋವ್ ಎಂಬಾತನು ಇತ್ತೀಚೆಗೆ ನಿಧನ ಹೊಂದಿದನು. ಇರಾಣದಲ್ಲಿ ೧೩೦ ವರ್ಷ ವಯಸ್ಸಿನ ಸದ್ಗೃಹಸ್ಥನು ಎಂಟು ವರ್ಷಗಳ ಹಿಂದೆ ೨೪ ವರ್ಷದ ಕನ್ಯೆಯನ್ನು ೧೮ನೇ ವಿವಾಹವಾದನು. ಅವಳಿಗೆ ೪ ಮಕ್ಕಳು. ಅವನ ಒಟ್ಟು ಪರಿವಾರ ೩೬೦ ಇದೆಯಂತೆ!

ನಾಲ್ಕನೆಯ ಪರಿಣಾಮವೆಂದರೆ. ಬಡತನ. ಅಮೇರಿಕೆಯಲ್ಲಿ ತಲಾ ಆದಾಯವು ವರ್ಷಕ್ಕೆ ಸುಮಾರು ೨೫೦೦೦ ರೂಪಾ

ಯಿಗಳಿವೆ. ಅದು ಜಪಾನದಲ್ಲಿ ೧೪೦೦೦ ರೂಪಾಯಿಗಳು ಮತ್ತು ಕುವಾಯತ್‌ದಂಥ ಚಿಕ್ಕ ರಾಷ್ಟ್ರದಲ್ಲಿ ೪೦,೦೦೦ ರೂಪಾಯಿಗಳು, ಇರುತ್ತದೆ. ಆದರೆ ಅದು ಕಮ್ಯುನಿಷ್ಟ ಚೀನದಲ್ಲಿ ೧೨೦೦ ರೂಪಾಯಿಗಳು ಮತ್ತು ಭಾರತದಲ್ಲಿ ೬೮೦ ರೂಪಾಯಿಗಳಿರುತ್ತದೆ. ೧೯೬೦-೧೯೬೧ ರ ಬೆಲೆ ಮಟ್ಟದಲ್ಲಿ ನಮ್ಮ ತಲಾ ಆದಾಯವು ಕೇವಲ ೩೩೦ ರೂಪಾಯಿಗಳಿರುತ್ತದೆ. ಅಂದರೆ ಒಬ್ಬನಿಗೆ ದಿನಂಪ್ರತಿ ೧ ರೂಪಾಯಿ ಸಹಿತ ಬೀಳುವದಿಲ್ಲ. ಶ್ರೀಲಂಕಾ ಮತ್ತು ಪಾಕಿಸ್ತಾನದಲ್ಲಿ ಸಹ ತಲಾ ಆದಾಯವು ಸ್ವಲ್ಪ ಹೆಚ್ಚುಕಡಿಮೆ ನಮ್ಮಲ್ಲಿಯಷ್ಟೇ ಇದೆ. ಹೀಗೆ. ಜೀವನ ಮಟ್ಟದಲ್ಲಿ ಏಶಿಯಾ ಮತ್ತು ಪಾಶ್ಚಾತ್ಯ ದೇಶಗಳಲ್ಲಿ ಭಾರೀ ವೈಷಮ್ಯವಿದೆ. ಧನಿಕ ಮತ್ತು ದರಿದ್ರ ದೇಶಗಳಲ್ಲಿಯ ಈ ಅಂತರ ಬೆಳೆಯುತ್ತ ನಡೆದರೆ. ಏಶಿಯಾದಲ್ಲಿ ಕಮ್ಯುನಿಜಂಗೆ ಆಮಂತ್ರಣವಿತ್ತಂತೆ. ಕೊನೆಗೆ ಅಂತರ್ರಾಷ್ಟ್ರೀಯ ಘರ್ಷಣೆಯಿಂದಾಗಿ ಮೂರನೇ ಮಹಾಯುದ್ಧವು ಸಂಭವಿಸಿದ್ದಾದರೆ. ಇಡೀ ಮಾನವಕುಲದ ವಿನಾಶ ಖಂಡಿತ.

ಭಾರತದಲ್ಲಿಯೇ ನಾವು ವಿಚಾರಿಸಿದರೂ ಸಹಿತ ಆರ್ಥಿಕ ಅಸಮಾನತೆಗಳು ಅತಿ ಒಡೆದು ಕಾಣುವವು. ದೇಶದಲ್ಲಿ ಪ್ರತಿಶತ ೨೨ ರಷ್ಟು ಜನ ಬಡತನದ ರೇಷೆಯ ಕೆಳಗಿರುವರು—ಅಂದರೆ ಕಡುಬಡವರಾಗಿರುವರು. ಈ ಪ್ರಮಾಣವು ಕರ್ನಾಟಕ. ಮಹಾರಾಷ್ಟ್ರ ಮತ್ತು ತಮಿಳುನಾಡಿನಲ್ಲಿ ಪ್ರತಿಶತ ೪೦ ರ ಮೇಲ್ಪಟ್ಟಿದೆ. ಹಿಂದೊಮ್ಮೆ ದಿ. ಪಂ. ನೆಹರೂರವರು ಹೇಳಿದಂತೆ ಪ್ರತಿಶತ ೨೬ ರಷ್ಟು ಜನರಿಗೆ ದಿನಾಲು ೪೨ ಪೈಸೆ ಸಹಿತ ಸಿಗುವದು

ದುಸ್ತರ. ನಮ್ಮ ರಾಷ್ಟ್ರೀಯ ಆದಾಯವು ೧೯೭೧–೭೨ ರಲ್ಲಿ ೧.೭%, ೧೯೭೨–೭೩ ರಲ್ಲಿ ೦.೪% ಮತ್ತು ೧೯೭೩–೭೪ ರಲ್ಲಿ ೪% ರಷ್ಟು ಹೆಚ್ಚಾಯಿತು. ವಾರ್ಷಿಕ ತಲಾ ಆದಾಯದ ಹೆಚ್ಚಳವು ಮಾತ್ರ ೨%ರಷ್ಟಿದೆ. ಅಂದರೆ ನಮ್ಮ ಈ ಆದಾಯವು ದುಪ್ಪಟ್ಟಾಗಬೇಕಾದರೆ ಇನ್ನೂ ೫೦ ವರ್ಷಗಳು ಬೇಕು! ಇದರಿಂದ ದೇಶದಲ್ಲಿ ಜೆ. ಪಿ. ಚಳವಳಿಯಂಥ ಚಳುವಳಿಗಳು ಹಬ್ಬಿ, ಸಂಪೂರ್ಣ ಕ್ರಾಂತಿಯಾಗುವದು ಖಂಡಿತ.

ಐದನೆಯದಾಗಿ ಜನ ಹೆಚ್ಚಳದಿಂದಾಗಿ ನಿರುದ್ಯೋಗ ಸಮಸ್ಯೆಯು ತೀವ್ರವಾಗುತ್ತಿದೆ. ೧೯೭೧ ರಲ್ಲಿ ಭಾರತದಲ್ಲಿ ಒಟ್ಟು ೧೮.೭ ದಶಲಕ್ಷ ನಿರುದ್ಯೋಗಿಗಳಿದ್ದರು. ನಗರ ಪ್ರದೇಶದಲ್ಲಿ ಸುಶಿಕ್ಷಿತರ ನಿರುದ್ಯೋಗತನವು ದಿನ ದಿನಕ್ಕೆ ಜಟಿಲವಾಗುತ್ತ ನಡೆದಿದೆ. ಸಾವಿರಾರು ಎಂಜಿನಿಯರರಿಗೆ ಉದ್ಯೋಗವಿಲ್ಲ. ಗ್ರಾಮೀಣ ಪ್ರದೇಶದಲ್ಲಿ ನಿರುದ್ಯೋಗ ಮತ್ತು ಅರೆನಿರುದ್ಯೋಗ ಸಮಸ್ಯೆಯು ಭೂತಾಕಾರವನ್ನು ತಾಳಿದೆ. ೮೦% ಜನ ಹಳ್ಳಿಗಳಲ್ಲಿರುವದರಿಂದ ಮತ್ತು ೭೦%ರಷ್ಟು ಜನ ಕೃಷಿಯಲ್ಲಿ ತೊಡಗಿದ್ದರಿಂದ, ಭೂಮಿಯ ಮೇಲಿನ ಜನಸಂಖ್ಯೆಯ ಒತ್ತಡವು ವಿಪರೀತವಾಗಿ, ಕೃಷಿಹಿಡುವಳಿಗಳು ಸಣ್ಣ ಸಣ್ಣ ತುಂಡುಗಳಾಗುತ್ತಿರುವವು. ಎಕರೆವಾರ ಉತ್ಪಾದಕತೆಯೂ ಕುಗ್ಗಿದೆ. ಒಟ್ಟಿಗೆ ಇದೊಂದು ವಿಷಚಕ್ರವಾಗಿ ಪರಿಣಮಿಸಿದೆ.

ಆರನೆಯದಾಗಿ ಬೆಲೆಯೇರಿಕೆಯು ಬಿಸಿಲು ಕುದುರೆಯಂತೆ ಓಡುತ್ತಿದೆ. ಜನ ಹೆಚ್ಚಳ ಮತ್ತು ಅತಿಪ್ರಸರಣದಿಂದ, ಅವಶ್ಯಕ ವಸ್ತುಗಳ ಬೆಲೆಗಳು ಗಗನಕ್ಕೇರಿವೆ. ಸರಕಾರ ಮತ್ತು ರಿಜರ್ವ್

ಬ್ಯಾಂಕಿನ ಅಂದಾಜಿನಂತೆ ೧೯೬೧–೧೯೭೪ ರ ನಡುವೆ ಲೋಕ ಧಾರಣೆಗಳು ೩೨೧% ರಷ್ಟು ಹೆಚ್ಚಿವೆ. ೧೯೭೩ ಜೂನ ಮತ್ತು ೧೯೭೪ ಜನೆವರಿ ಮಧ್ಯ ೧೯% ರಷ್ಟು ಹೆಚ್ಚಿವೆ. ಹಿಂದಿನ ಹಣ ಕಾಸಿನ ಮಂತ್ರಿಗಳಾದ ಶ್ರೀ ವಾಯ್. ಬಿ. ಚವ್ಹಾಣರ ಹೇಳಿಕೆ ಮೇರೆಗೆ, ಕಳೆದ ೧೪–೧೫ ವರ್ಷಗಳಲ್ಲಿ ನಮ್ಮ ರೂಪಾಯಿಯ ಬೆಲೆಯು ೩೭ ಪೈಸೆಗಳಿಗೆ ಇಳಿದಿದೆ. ಜನರ ಕ್ರಯ ಶಕ್ತಿಯು ಹ್ರಾಸವಾಗಿ, ಜೀವನ ಮಟ್ಟ ಇನ್ನಷ್ಟು ನಿಕೃಷ್ಟವಾಗಿದೆ. ನಾಗಾ ಲೋಟಕ್ಕೇರಿರುವ ಬೆಲೆಗಳನ್ನು ಕೆಳಗಿಳಿಸಲು ರಶಿಯದ ಆಕಾಶ ಬಾಣಕ್ಕೆ ಮಾತ್ರ ಸಾಧ್ಯವಿದ್ದಂತೆ ತೋರುತ್ತದೆ !

ಏಳನೆಯದಾಗಿ ಕುಟುಂಬ ಯೋಜನೆಯ ಅಭಾವ ಅಥವಾ ವಿಫಲತೆಯಿಂದ, ಇಂದು ಲ್ಯಾಟಿನ್ ಅಮೇರಿಕ, ಆಫ್ರಿಕ ಮತ್ತು ಏಶಿಯಾದ ದೇಶಗಳಲ್ಲಿ ಶಿಶುಗಳ ಮಳೆಯು ಭೋರ್ಗರೆಯುತ್ತಿದೆ. ೨೦೦೦ನೇ ಇಸ್ವಿಯ ಹೊತ್ತಿಗೆ ಈ ಪ್ರದೇಶಗಳ ಜನಸಂಖ್ಯೆಯು ಜಗತ್ತಿನ ಜನಸಂಖ್ಯೆಯಲ್ಲಿ ೮೦%ರಷ್ಟಾಗುವದು. ದೇಶಗಳ ವಿಸ್ತಾರವು ಅಷ್ಟೇ ಇರುವದರಿಂದ ಜನಸಾಂದ್ರತೆಯ ವೈಷಮ್ಯವೂ ಹೆಚ್ಚುವದು. ಈಗ ಪ್ರತಿ ಚದುರ ಕಿಲೊಮೀಟರ ವಿಸ್ತೀರ್ಣಕ್ಕೆ ಜಪಾನದಲ್ಲಿ ೨೮೦, ಇಂಗ್ಲಂಡಿನಲ್ಲಿ ೨೨೮, ಕಮ್ಯುನಿಷ್ಟ ಚೀನದಲ್ಲಿ ೭೯, ಅಮೇರಿಕೆಯಲ್ಲಿ ೨೨, ರಶಿಯಾದಲ್ಲಿ ೧೧, ಕೆನಡಾದಲ್ಲಿ ೨ ಜನ ವಾಸಿಸುತ್ತಾರೆ. ಭಾರತದ ಸರಾಸರಿ ೧೬೪ ಇದ್ದು. ದಿಲ್ಲಿ ಕೇಂದ್ರಾಡಳಿತ ಪ್ರದೇಶದಲ್ಲಿ ಅದು ೨೬೩೮ ಇದೆ.

ನಮ್ಮ ದೇಶದಲ್ಲಿ ಮಕ್ಕಳನ್ನು ಹಡೆಯುವದೆಂದರೆ ಒಂದು ಹಬ್ಬವಿದ್ದಂತೆ. ಅದೊಂದು ಹೆಮ್ಮೆಯ ವಿಷಯವೇ ಆಗಿದೆ.

ಪ್ರತಿ ಕುಟುಂಬಕ್ಕೆ ೬-೭ ಮಕ್ಕಳಿರುವದು ಸಾಮಾನ್ಯವಾಗಿದೆ.
ಸ್ವತಃ ನನ್ನ ನಿರೀಕ್ಷಣೆಗೆ ಬಂದದ್ದೆಂದರೆ ಒಬ್ಬ ಮಹಾಶಯನು
೨೩ ಮಕ್ಕಳ ತಂದೆ ಇದ್ದದ್ದು. ಇನ್ನೊಂದು ಮೋಜಿನ ಸಂಗತಿ
ಯೆಂದರೆ ಒಂದು ಕುಟುಂಬದಲ್ಲಿ ಅತ್ತೆ, ಸೊಸೆ ಹಾಗೂ ಮಗಳು
ಏಕಕಾಲಕ್ಕೇ ಪ್ರಸೂತಿಗೈದದ್ದು. ಪರಿಣಾಮವೆಂದರೆ, ನಮ್ಮ ಪಂಚ
ವಾರ್ಷಿಕ ಯೋಜನೆಗಳ ಸಾಧನೆ ನಿಷ್ಫಲವಾಗಿದೆ.

ಇನ್ನು ಕೊನೆಯದಾಗಿ ಜನಸಂಖ್ಯಾ ಸ್ಫೋಟವು ನಮ್ಮ
ದೇಶದಲ್ಲಿ ಅನೇಕ ದುಷ್ಪರಿಣಾಮಗಳನ್ನುಂಟುಮಾಡಿದೆ. ಅವೇ
ನೆಂದರೆ ನೈತಿಕ ಅಧೋಗತಿ, ಸಾಮಾಜಿಕ ಅಪರಾಧಗಳು, ಆರ್ಥಿಕ
ಮುಗ್ಗಟ್ಟು ರಾಜಕೀಯ ಅಸ್ಥಿರತೆಗಳೇ ಆಗಿವೆ. ವಿದ್ಯಾರ್ಥಿ
ಅಶಿಸ್ತು, ಕಾರ್ಮಿಕ ಅಶಾಂತಿ, ಸಂಪು, ಮತಪ್ರದರ್ಶನ, ಘೇರಾವೊ,
ಲೂಟಿ, ದೊಂಬಿ, ಸುಶಿಕ್ಷಿತ ಕಳ್ಳತನ, ವಿಧ್ವಂಸಕ ಕೃತ್ಯಗಳು
ನಿತ್ಯದ ಮಾತಾಗಿಬಿಟ್ಟಿವೆ. ಮೋಸ, ವಂಚನೆ, ದರೋಡೆ, ಆತ್ಮ-
ಹತ್ಯೆ, ಹಿಂಸೆ, ಕೊಲೆ, ಸುಲಿಗೆ, ಭ್ರಷ್ಟಾಚಾರ ಮತ್ತು ವ್ಯಭಿಚಾರ
ಗಳು ಸರ್ವಸಾಮಾನ್ಯವಾಗಿವೆಯೆಂದರೆ, ಅತಿ ರಂಜಿತವಾಗಲಾರದು.
ಅವಿಭಕ್ತ ಕುಟುಂಬಗಳು ಒಡೆಯುತ್ತಿವೆ. ಜೀವನ ಉಚ್ಚಮೌಲ್ಯ
ಗಳು ಮಾಯವಾಗುತ್ತಿವೆ. ನಮ್ಮ ಪುರಾತನ ಕಾಲದ ಸಂಸ್ಕೃತಿ
ಮತ್ತು ಪರಂಪರೆಗಳು ನಾಶ ಹೊಂದುತ್ತಿವೆ. ಈಗಿನ ಪೀಳಿಗೆ
ಯಲ್ಲಿ ಸ್ವಾರ್ಥ, ಸಂಕುಚಿತತನ ಮತ್ತು ಭೌತಿಕ ದೃಷ್ಟಿಯು ಬೆಳೆ
ಯುತ್ತಿವೆ. ಜನಸಂಖ್ಯಾ ಸ್ಫೋಟದಿಂದ ರಾಜಕಾರಣಿಗಳು,
ಅರ್ಥಶಾಸ್ತ್ರಜ್ಞರು ಮತ್ತು ಸಾಮಾಜಿಕ ಕಾರ್ಯಕರ್ತರು ಧೃತಿ
ಗೆಟ್ಟಿದ್ದಾರೆ. "ಯಾವ ಸರಕಾರ ಬಂದರೇನು ? ನಮಗೆ ರಾಗಿ

ಬೀಸುವದು ತಪ್ಪುವದಿಲ್ಲ" ಎಂಬ ನಿರಾಶಾಭಾವನೆ ಜನಸಾಮಾನ್ಯರ ಮನಸ್ಸಿನಲ್ಲಿ ಆಳವಾಗಿ ಬೇರೂರಿಬಿಟ್ಟಿದೆ. ಮಧ್ಯಮ ವರ್ಗದ ಜನರ ಗೋಳಂತೂ ಹೇಳತೀರದಾಗಿದೆ. ಆರ್ಥಿಕ ತೊಂದರೆಗಳು ಅವರ ಬೆನ್ನುಮೂಳೆಯನ್ನೇ ಮುರಿದು ಹಾಕಿವೆ. ಕರಭಾರ ಹೆಚ್ಚುತ್ತಿದ್ದು, ಅದೇ ಕಾಲಕ್ಕೆ ಸರಕಾರದ ಆಂತರಿಕ ಹಾಗೂ ಬಾಹ್ಯ ಸಾಲಗಳೂ ಹೆಚ್ಚುತ್ತಿವೆ. ಇನ್ನು ಮುಂದಿನ ತಲೆಮಾರಿನವರು 'ಬಡ್ಡಿಮಕ್ಕಳು' ಆಗುವರೋ ? ಒಟ್ಟಿನಮೇಲೆ. ಅತಿ ಜನಸಂಖ್ಯೆಯು ಚಿಂತಾಜನಕ ಪರಿಸ್ಥಿತಿಯನ್ನು ನಿರ್ಮಿಸಿದೆ.

## ೪. ಸಲಹೆ ಸೂಚನೆಗಳು

ಜನಸಂಖ್ಯಾ ಸ್ಫೋಟದಂಥ ಜಗದ್ವ್ಯಾಪಿ ಸಮಸ್ಯೆಗೆ ಈ ಕೆಳಕಂಡ ಕ್ರಮಗಳು ಅವಶ್ಯವಿದ್ದು ಕುಟುಂಬ ಯೋಜನೆಯನ್ನು ಎಲ್ಲ ಹಿಂದುಳಿದ ಮತ್ತು ಜಗದ್ಭರಿತ ರಾಷ್ಟ್ರಗಳು ಧೃಡವಾಗಿ ಮತ್ತು ಸುಯೋಜಿತವಾಗಿ ಈ ಕೂಡಲೇ ಕೈಕೊಳ್ಳಬೇಕು. ಇಲ್ಲವಾದರೆ ವಿನಾಶವು ಕಟ್ಟಿಟ್ಟದ್ದು. ದೀರ್ಘಕಾಲೀನ ಕ್ರಮಗಳನ್ನು ಯೋಜಿಸತಕ್ಕದ್ದು. ಸಂಬಂಧಿಸಿದ ಸರಕಾರಗಳು ಹೆಚ್ಚಿನ ಹಣಕಾಸು. ಸುಸಂಘಟಿತ ಪ್ರಚಾರ ಮತ್ತು ಸುಸಜ್ಜಿತವಾದ ಆರೋಗ್ಯ ಕೇಂದ್ರಗಳ ಮೂಲಕ ಜನಸಂಖ್ಯೆ ಹೆಚ್ಚಳದ ಆಹ್ವಾನವನ್ನು ಪರಿಣಾಮಕಾರಿಯಾಗಿ ಎದುರಿಸಬಲ್ಲವು. ಭಾರತದ ಆರೋಗ್ಯ ಹಾಗೂ ಕುಟುಂಬ ಯೋಜನಾ ಮಂತ್ರಿಗಳಾದ ಡಾ. ಕರಣ

ಸಿಂಗರು ಇತ್ತೀಚೆಗೆ ಕಲಕತ್ತೆಯಲ್ಲಿ ಕರೆ ಕೊಟ್ಟಂತೆ, ಈ ಸಮಸ್ಯೆಯನ್ನು ಯುದ್ಧ ತಳಹದಿಯಮೇಲೆ ಬಿಡಿಸಬೇಕು.

ಇದಕ್ಕೆ ಜನತೆಯಾದರೂ ಯಾವದೇ ಸ್ವಾರ್ಥ ಹಾಗೂ ಧರ್ಮಕಟ್ಟಳೆಗಳಿಗೊಳಗಾಗದೆ ಸರಕಾರದ ಕೂಡ ಹೃತ್ಪೂರ್ವಕವಾಗಿ ಸಹಕರಿಸುವದು ಅವರ ಆದ್ಯ ಕರ್ತವ್ಯವಾಗಿದೆ. ಜನರು ವಿಶಾಲ ದೃಷ್ಟಿಯಿಂದ, ದೂರಗಾಮಿ ಹಾಗೂ ರಾಷ್ಟ್ರೀಯ ಹಿತಕ್ಕಾಗಿ ಜನಸಂಖ್ಯಾನಿಯಂತ್ರಣದ ಹೊಣೆಯನ್ನು ಚಾಚೂ ತಪ್ಪದೆ ನಿರ್ವಹಿಸಬೇಕು. ದೊಡ್ಡ ಕುಟುಂಬಗಳ ಯಜಮಾನ ಮತ್ತು ಯಜಮಾನಿಯವರಿಗೆ ಗೌರವ ತೋರುವ ಬದಲು, ಸಾಮಾಜಿಕ ಖಂಡನೆ ವ್ಯಕ್ತಪಡಿಸಬೇಕು. ಸರಕಾರವು ಕೈಕೊಳ್ಳುವ ಎಲ್ಲ ಕ್ರಮಗಳನ್ನು ಸ್ವಯಂಪ್ರೇರಣೆಯಿಂದ ಮತ್ತು ಪ್ರಾಮಾಣಿಕವಾಗಿ ಯಶಸ್ವಿಗೊಳಿಸಲು ಮುಂದಾಗುವದು ಒಳ್ಳೆಯ ನಾಗರಿಕತೆಯ ಲಕ್ಷಣ.

೧) ಸರಕಾರವು ಸಂತಾನ ನಿರೋಧ ಶಸ್ತ್ರಕ್ರಿಯೆಗೊಳಗಾಗುವವರಿಗೆ, ಅದಕ್ಕೆ ಪ್ರೇರಣೆ ನೀಡುವವರಿಗೆ ಹಣಕಾಸಿನ ಆಕರ್ಷಣೆ ಹಾಗೂ ಪ್ರಕ್ಕಟೆ ಔಷಧೋಪಚಾರವನ್ನು ನೀಡಬೇಕು.

೨) ಹಳ್ಳಿಗಳಲ್ಲಿ ಬಿರುಸಿನ ಪ್ರಚಾರ ಹಾಗೂ ತಪ್ಪು ತಿಳುವಳಿಕೆಗಳ ನಿವಾರಣೆಗೆ ಸೂಕ್ತಕ್ರಮಗಳನ್ನು ಕೈಕೊಳ್ಳುವದು ಅವಶ್ಯವಿರುವದು.

೩) ತರಬೇತಿ ಹೊಂದಿದ ಸಿಬ್ಬಂದಿ, ಸಾಕಷ್ಟು ಹಣ ಮತ್ತು ಸಲಕರಣೆಗಳ ಅವಶ್ಯಕತೆಯೂ ಬಹಳವಿರುವದು.

೪) ಕೆಲವು ಧರ್ಮಗುರುಗಳು ನಡೆಸಿರುವ ಕಿಡಿಗೇಡಿತನವನ್ನು ಹತ್ತಿಕ್ಕಬೇಕು.

೫) ಸಣ್ಣ ಕುಟುಂಬವುಳ್ಳವರಿಗೆ ಪ್ರೋತ್ಸಾಹ ಬೇಕು. ಅದೇ ಕಾಲಕ್ಕೆ ದೊಡ್ಡ ಕುಟುಂಬದವರಿಗೆ ಒಂದು ಬಗೆಯ ಶಿಕ್ಷೆಯೂ ಬೇಕು—ಉದಾಹರಣೆಗೆ ೪ನೇ ಮಗುವಿನಿಂದ ಮುಂದೆ ಹೆರಿಗೆಯ ಸೌಲಭ್ಯ, ಉಚಿತ ಶಿಕ್ಷಣ ಮುಂತಾದವುಗಳನ್ನು ತೆಗೆದು ಹಾಕಬೇಕು. ಮೂರು ಮಕ್ಕಳನಂತರ, ಭಾರವಾದ ಹೆರಿಗೆಯ ತೆರಿಗೆಯನ್ನೂ ವಿಧಿಸಬಹುದು.

೬) ಜನರ ಬಡತನವನ್ನು ಹಿಂಗಿಸಿ ಅವರಿಗೆ ಉತ್ಕೃಷ್ಟ ಆಹಾರ ಮತ್ತು ಬೇರೆ ಬೇರೆ ಮನರಂಜನೆಗಳನ್ನು ಒದಗಿಸಿದರೆ, ಜನನ ಪ್ರಮಾಣವು ತಾನಾಗಿಯೆ ಇಳಿಯುತ್ತದೆ.

೭) ನಿರಕ್ಷರತೆ ಮತ್ತು ಮೂಢ ನಂಬಿಕೆಗಳ ಉಚ್ಚಾಟನೆಯ ಜೊತೆಗೆ, ಶಿಕ್ಷಣದಲ್ಲಿ ಕುಟುಂಬ ಯೋಜನೆಯ ಪಠ್ಯಕ್ರಮವನ್ನು ಕಡ್ಡಾಯವಾಗಿ ಸೇರಿಸತಕ್ಕದ್ದು.

೮) ಮದುವೆಯ ಕನಿಷ್ಟ. ವಯೋಮಿತಿಯನ್ನು ಪುರುಷರಿಗೆ ೨೫ ಹಾಗೂ ಸ್ತ್ರೀಯರಿಗೆ ೨೦ ವರ್ಷ ಎಂದು ನಿಗದಿಪಡಿಸುವದು ಅತ್ಯವಶ್ಯ. ಬಾಲವಿವಾಹ ಹಾಗೂ ಶಿಶುವಿವಾಹಗಳನ್ನು ಜರುಗಿಸುವ ಇಲ್ಲವೆ ಪ್ರೋತ್ಸಾಹಿಸುವಂಥ ಪ್ರತಿಗಾಮಿ ವ್ಯಕ್ತಿಗಳನ್ನು ಕಠೋರವಾಗಿ ದಂಡಿಸಲೇಬೇಕು.

೯) ಬ್ರಹ್ಮಚಾರಿಯಾಗಿ ಉಳಿಯುವವರನ್ನು ಗೌರವಿಸಿ ಕೆಲವು ಬಿರುದುಗಳನ್ನು ಕೊಡಬಹುದು. ಆಗ ಬ್ರಹ್ಮಚರ್ಯವು ಒಂದು ಆಕರ್ಷಣೆಯಾಗುತ್ತದೆ.

೧೦) ಕೇವಲ ಜನಸಂಖ್ಯೆ ತಗ್ಗಿಸಿದರಾಗದು. ಜೊತೆಗೆ ಕೃಷಿ ಹಾಗೂ ಔದ್ಯಮಿಕ ಉತ್ಪಾದನೆಯನ್ನೂ ಹೆಚ್ಚಿಸಿದರೆ. ರಾಷ್ಟ್ರೀಯ ಆದಾಯ ಮತ್ತು ತಲಾ ಆದಾಯಗಳು ಹೆಚ್ಚುವವು.

೧೧) ಆರ್ಥಿಕ ಅಸಮಾನತೆ ಮತ್ತು ನಿರುದ್ಯೋಗತನವನ್ನು ನಿವಾರಿಸಬೇಕು. ಇದರಿಂದ ತೋರಿಕೆಗೆ ಹೆಚ್ಚೆನಿಸುವ ಜನಸಂಖ್ಯೆಯೇ ಮುಂದೆ ಸರಿಯಾದ ಜನಸಂಖ್ಯೆಯಾಗುವದು. ಆಧುನಿಕ ಜನಸಂಖ್ಯಾ ಸಿದ್ಧಾಂತವೂ ಇದನ್ನೇ ಒತ್ತಿ ಹೇಳುತ್ತದೆ. ದೇಶದ ಸಂಪನ್ಮೂಲಗಳನ್ನು ಸರಿಯಾಗಿ ಮತ್ತು ಪೂರ್ಣವಾಗಿ ಉಪಯೋಗಿಸಬೇಕು. ಯಾವ ಹಂತದಲ್ಲಿ ತಲಾ ಆದಾಯವು ಗರಿಷ್ಟ. ಮಿತಿಯನ್ನು ಮುಟ್ಟುತ್ತದೊ ಆ ವೇಳೆಗಿರುವ ಜನಸಂಖ್ಯೆ ಆ ದೇಶಕ್ಕೆ ಅತಿ ಸರಿಯಾದದ್ದೆನ್ನಬಹುದು.

೧೨) ಎಷ್ಟೋ ಸಲ ಅತಿಪ್ರಸರಣ. ವಸತಿ ಸಮಸ್ಯೆ ಮತ್ತು ಆಹಾರ ಸಮಸ್ಯೆಗಳು ಜನರಲ್ಲಿ ವಿನಾಕಾರಣವಾಗಿ ಜನಸಂಖ್ಯೆಯೇ ಅತಿಯಾಗಿ ಬೆಳೆದಿದೆಯೆಂಬ ತಪ್ಪು ಚಿತ್ರವನ್ನು ಮೂಡಿಸುತ್ತವೆ. ಆದ್ದರಿಂದ ಆ ಸಮಸ್ಯೆಗಳನ್ನೇ ನಿರ್ಮೂಲ ಮಾಡಿದರೆ ಜನಸಂಖ್ಯೆ ಹೆಚ್ಚಳದ ಕಾಲ್ಪನಿಕತೆಯು ಮಾಯವಾಗುತ್ತದೆ.

(೧೩) ಕೊನೆಯದಾಗಿ ಕೆಲವು ಅಂತರ್ರಾಷ್ಟ್ರೀಯ ಕ್ರಮಗಳೂ ಅತ್ಯವಶ್ಯವಿರುತ್ತವೆ. ಉದಾಹರಣೆಗೆ ಯಾವ ದೇಶವು ತನ್ನ ಜನಸಂಖ್ಯೆಯನ್ನು ನಿಯಂತ್ರಿಸಲು ವಿಫಲವಾಗುತ್ತದೊ ಅಂಥ ದೇಶಕ್ಕೆ ಅಂತರ್ರಾಷ್ಟ್ರೀಯ ಸಂಸ್ಥೆಗಳಿಂದ ಯಾವದೆ ಸಹಾಯವನ್ನು ಕೊಡಕೂಡದು. 'ಮೂಗು ಹಿಡಿದರೆ ಬಾಯಿ ತೆರೆ

ಯುತ್ತದೆ ಎಂಬಂತೆ ಈ ಕ್ರಮವು ಎಲ್ಲ ದೇಶಗಳನ್ನು ಕಣ್ದೆರೆಯು ವಂತೆ ಮಾಡುತ್ತದೆ. ರೆಡ್‌ಕ್ರಾಸ್. ರೋಟರಿ ಕ್ಲಬ್. ಲಯನ್ಸ ಕ್ಲಬ್, ಮುಂತಾದ ಸೇವಾ ಸಂಸ್ಥೆಗಳೂ ಇದಕ್ಕೆ ಮುಂದಾಗಿ ದೊಡ್ಡ ಪ್ರಮಾಣದಲ್ಲಿ ಹಣಕಾಸು, ಔಷಧೋಪಚಾರ ಮತ್ತು ಆಸ್ಪತ್ರೆಯ ಸಲಕರಣೆಗಳನ್ನು ಒದಗಿಸಬಹುದು. ದೇಶದೇಶಗಳ ನಡುವಿನ ಆರ್ಥಿಕ ಮತ್ತು ಸಾಮಾಜಿಕ ವೈಷಮ್ಯಗಳನ್ನು ಅಂತರ್‍ರಾಷ್ಟ್ರೀಯ ಬ್ಯಾಂಕು, ವಿಶ್ವಹಣಕಾಸಿನ ನಿಧಿ ಮುಂತಾದವುಗಳ ಮೂಲಕ ತೊಡೆದುಹಾಕಬೇಕು. ಇದೆಲ್ಲಕ್ಕೂ ಹೆಚ್ಚಿನದೆಂದರೆ ಅಂತರ್‍ರಾ-ಷ್ಟ್ರೀಯ ವಲಸೆ ಕಾಯಿದೆಗಳಲ್ಲಿ ಕ್ರಾಂತಿಕಾರಕ ಮಾರ್ಪಾಡಾಗ ಬೇಕು. ಇದಕ್ಕೆ ನಿಸ್ವಾರ್ಥತನ, ವಿಶಾಲ ದೃಷ್ಟಿಕೋನ. ದೂರ ದೃಷ್ಟಿ ಮತ್ತು ಪರಸ್ಪರ ನಂಬಿಕೆ. ವಿಶ್ವಾಸ, ಪ್ರೀತಿ. ಮಾನವೀ ಯತೆ ಹಾಗೂ ಸಹಕಾರ ಮನೋಭಾವನೆಗಳು ಎಲ್ಲರಲ್ಲಿಯೂ ಮೂಡಿಬರಬೇಕು. ಜಾಗತಿಕ ನಾಗರಿಕತ್ವ, ಒಂದೇ ವಿಶ್ವಸರಕಾರ ಮತ್ತು ಅಂತರ್‍ರಾಷ್ಟ್ರೀಯ ಭ್ರಾತೃತ್ವದ ಕನಸು ನನಸಾಗಬೇಕು.

ದಕ್ಷಿಣ ಆಫ್ರಿಕೆಯಂಥ ದೇಶಗಳು ವರ್ಣದ್ವೇಷ ನೀತಿ ಯನ್ನು ತ್ಯಜಿಸತಕ್ಕದ್ದು. ಪೋರ್ಚುಗಾಲದಂಥ ದೇಶಗಳು ವಸಾಹತುಶಾಹಿ ನೀತಿಯನ್ನು ಬಿಟ್ಟುಕೊಡಬೇಕು. ಅರಬ ರಾಷ್ಟ್ರ ಗಳು ತಮ್ಮ ಅತಿ ರಾಷ್ಟ್ರೀಯವಾದ ಮತ್ತು ಧರ್ಮಾಂಧತೆಯನ್ನು ಕಳಚಿ ಹಾಕಬೇಕು. ಸಾಮ್ರಾಜ್ಯಶಾಹಿ ನೀತಿಯನ್ನು ಪಾಶ್ಚಾತ್ಯ ರಾಷ್ಟ್ರಗಳು ಬೇಗ ತೊರೆದಷ್ಟು ಉತ್ತಮ. ಕಮ್ಯುನಿಸ್ಟ ರಾಷ್ಟ್ರ ಗಳು ತಮ್ಮಲ್ಲಿಯ ಸಂಶಯಭಾವನೆಯ 'ಕಬ್ಬಿಣ ಪರದೆ' ಯನ್ನು ಕಿತ್ತೆಸೆಯಬೇಕು. ಇತ್ತ ನಾವಾದರೂ ಪರದೇಶಗಳಿಗೆ ಹೋಗಿ

ಅಲ್ಲಿ ಶಾಶ್ವತವಾಗಿ ನೆಲೆಸಲು ಮನಸ್ಸು ಮತ್ತು ಧೈರ್ಯ ಮಾಡ ಬೇಕು. ಸಂಬಂಧಿಸಿದ ಸರಕಾರಗಳು ಮುಖ್ಯವಾಗಿ ದೊಡ್ಡ ಪ್ರಮಾಣದ ಮೇಲೆ ನಾಗರಿಕರ ವಿನಿಮಯ ಮಾಡಿಕೊಳ್ಳಬೇಕು. ಅಂದಾಗ ಮಾತ್ರ ಈಗಿರುವ ಜನಸಂಖ್ಯಾ ಅಸಮತೋಲವು ಇಲ್ಲ ದಂತಾಗುವದು. ಬೇರೆಬೇರೆ ದೇಶಗಳ ನಾಗರಿಕತ್ವವನ್ನು ದಯ ಪಾಲಿಸುವ ಷರತ್ತುಗಳು ಸಡಿಲಾಗಬೇಕು.

ಈಗ ವಿಚಿತ್ರವೆಂದರೆ ರಶಿಯದ ವಿಸ್ತಾರವು ಭಾರತದ ವಿಸ್ತಾರದ ಏಳುಪಟ್ಟು ಇದ್ದರೂ ಅದರ ಜನಸಂಖ್ಯೆ ಕೇವಲ ೨೪ ಕೋಟಿ ಇರುವದು. ವಿಸ್ತೀರ್ಣದಲ್ಲಿ ಭಾರತದ ಮೂರರಷ್ಟಿರುವ ಅಮೇರಿಕೆಯು ೨೦ ಕೋಟಿ ಜನರನ್ನು ಮಾತ್ರ ಹೊಂದಿದೆ. ಭಾರತಕ್ಕಿಂತ ವಿಶಾಲವಾಗಿದ್ದರೂ ಆಸ್ಟ್ರೇಲಿಯದ ಜನಸಂಖ್ಯೆಯು ಭಾರತದ ವಾರ್ಷಿಕ ಜನಸಂಖ್ಯಾ ಹೆಚ್ಚಳಕ್ಕೆ ಸಮನಾಗಿದೆ! ಪ್ರತಿ ಚದುರ ಕಿಲೊಮೀಟರಿಗೆ ನಮ್ಮಲ್ಲಿ ೨೮೦ ಜನರು ಬಿದ್ದರೆ ಕೆನಡಾ ದಲ್ಲಿ ಕೇವಲ ಎರಡು ಜನರು ಬೀಳುತ್ತಾರೆ. ಏಶಿಯಾದ ದೇಶ ಗಳಲ್ಲಿ ಕುಟುಂಬ ಯೋಜನೆ ನಡೆಸಿದ್ದರೆ ಜರ್ಮನಿಯಲ್ಲಿ ಕುಟುಂಬ ವಿಸ್ತರಣೆಯು ನಡೆದಿದೆ. ದೊಡ್ಡ ಕುಟುಂಬಗಳನ್ನು ಪ್ರೋತ್ಸಾ ಹಿಸಲು ಜರ್ಮನ್ ಸರಕಾರವು ೫೦೦೦ ಮಾರ್ಕುಗಳ ಸಾಲದ ಆಕರ್ಷಕ ಯೋಜನೆಯನ್ನು ಜಾರಿಗೊಳಿಸಿದೆ. ಇದೇ ಉದ್ದೇಶ ದಿಂದ ರಶಿಯಾದ ಸರಕಾರವು ಅಲ್ಲಿ ೯ ಮಕ್ಕಳನ್ನು ಪಡೆದ ತಾಯಿಗೆ 'ಮದರಹುಡ್' ಮತ್ತು ೧೩ ಮಕ್ಕಳನ್ನು ಪಡೆದ ತಾಯಿಗೆ 'ಮದರ ಹೀರೋಯಿನ್' ಎಂಬ ಪದಕಗಳನ್ನಿತ್ತು ಗೌರವಿಸು ತ್ತದೆ. ಇದೆಂಥ ವೈಚಿತ್ರ್ಯ ಮತ್ತು ವಿರೋಧಾಭಾಸ!

ಆದ್ದರಿಂದ ನಮ್ಮ ಬಲವಾದ ಪ್ರತಿಪಾದನೆಯೆಂದರೆ ಭಾರತ, ಚೀನದಂಥ ದೇಶಗಳಲ್ಲಿನ ಜನರು ಆಸ್ಟ್ರೇಲಿಯಾ, ನ್ಯೂಝೀಲೆಂಡ, ಕೆನಡಾ, ಅಮೇರಿಕ ಮತ್ತು ರಶಿಯಾಗಳಿಗೆ ಹೋಗಿ ಶಾಶ್ವತವಾಗಿ ನೆಲೆಸುವಂತಾಗಬೇಕು. ಆಫ್ರಿಕೆಯ ಕೆಲ ದೇಶಗಳು ಏಶಿಯಾ ವಿರೋಧಿ ನೀತಿಯನ್ನು ಬಿಟ್ಟುಕೊಡಲು ಒತ್ತಾಯ ತರತಕ್ಕದ್ದು. ಇಂಗ್ಲೆಂಡದಲ್ಲಿ ಇತ್ತೀಚೆಗೆ ವಲಸೆಗಾರ ರನ್ನು ದೊಡ್ಡದೊಡ್ಡ ಉದ್ದಿಮೆದಾರರು ಖರೀದಿಮಾಡಿ ಅವ ರನ್ನು ದಿನಕ್ಕೆ ೧೬ ತಾಸು ದುಡಿಸುತ್ತಾರಂತೆ. ಇದು ನಿಜವಿದ್ದಲ್ಲಿ ಸಂ. ರಾ. ಸಂಸ್ಥೆಯು ಆ ಸರಕಾರದ ವಿರುದ್ಧ ಬಿಗುವಿನ ಕ್ರಮ ಗಳನ್ನು ಯೋಜಿಸಬೇಕು. ಇಲ್ಲದಿದ್ದರೆ ಜನರು ಪರದೇಶಕ್ಕೆ ಹೋಗಲು ಹೆದರುತ್ತಾರೆ. ವಲಸೆ ಹೋದ ನಾಗರಿಕರಿಗೆ ಪರ ದೇಶಗಳಲ್ಲಿ ಯೋಗ್ಯ ರಕ್ಷಣೆ, ಉದ್ಯೋಗ ಮತ್ತು ಮರ್ಯಾದೆ ಸಿಗುವಂತಾಗಬೇಕು.

ಈ ಮೇಲ್ಕಾಣಿಸಿದ ರಾಷ್ಟ್ರೀಯ ಹಾಗೂ ಅಂತರ್ರಾಷ್ಟ್ರೀಯ ಕ್ರಮಗಳನ್ನು ಕೂಡಲೇ ಮತ್ತು ಕಟ್ಟುನಿಟ್ಟಾಗಿ ಜಾರಿಗೆ ತಂದರೆ ಅಂತರ್ರಾಷ್ಟ್ರೀಯ ಜನಸಂಖ್ಯಾ ಸಮತೋಲವು ಏರ್ಪಡುವದರಲ್ಲಿ ಸಂದೇಹವಿಲ್ಲ. ಇದಕ್ಕೆ ಸಂ. ರಾ. ಸಂಸ್ಥೆಯು ಒಂದು ದೀರ್ಘ ಕಾಲೀನ ಯೋಜನೆಯೊಂದನ್ನು ತಯಾರಿಸಿ ಈ ಕೂಡಲೇ ಕಾರ್ಯ ಪ್ರವೃತ್ತವಾಗಬೇಕು.

# ೫. ಇತ್ತೀಚೆಗೆ ಕೈಕೊಂಡ ಕೆಲ ಕ್ರಮಗಳು

ಈಗಾಗಲೇ ಗೊತ್ತಿದ್ದಂತೆ. ಹಿಂದುಳಿದ ರಾಷ್ಟ್ರಗಳಲ್ಲಿ ಭಾರತವೇ ಮೊಟ್ಟಮೊದಲಾಗಿ ಜನಸಂಖ್ಯಾ ನಿಯಂತ್ರಣಕ್ಕೆ ಕೈ ಹಾಕಿತು. ಮೊದಲನೇ ಪಂಚವಾರ್ಷಿಕ ಯೋಜನೆಯಲ್ಲಿ ಈ ಕಾರ್ಯಕ್ರಮಕ್ಕೆ ೬೫ ಲಕ್ಷ ರೂಪಾಯಿಗಳನ್ನು ಖರ್ಚು ಮಾಡಲಾಯಿತು. ಮುಂದೆ ಎರಡನೇ ಪಂಚವಾರ್ಷಿಕ ಯೋಜನೆಯಲ್ಲಿ ೫ ಕೋಟಿ ರೂಪಾಯಿ. ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ೨೫ ಕೋಟಿ ರೂಪಾಯಿ. ಚತುರ್ಥ ಪಂಚವಾರ್ಷಿಕ ಯೋಜನೆಯಲ್ಲಿ ೨೮೬ ಕೋಟಿ ರೂಪಾಯಿಗಳನ್ನು ಖರ್ಚು ಮಾಡಲಾಯಿತು. ಇದಲ್ಲದೆ ಚತುರ್ಥ ಯೋಜನೆಯ ಅವಧಿಯಲ್ಲಿ ಜಾಗತಿಕ ಆರೋಗ್ಯ ಸಂಸ್ಥೆಯು ಸುಮಾರು ೧೫ ಕೋಟಿ ರೂಪಾಯಿ ಬೆಲೆ ಬಾಳುವ ವಾಹನಗಳು. ಸಾಧನಗಳು ಮತ್ತು ಔಷಧಗಳನ್ನೂ ಭಾರತಕ್ಕೆ ಒದಗಿಸಿದೆ. ಸರಕಾರವು ಪಂಚಮ ಪಂಚವಾರ್ಷಿಕ ಯೋಜನೆಯಲ್ಲಿ ದೊಡ್ಡ ಮೊತ್ತವನ್ನು ಅಂದರೆ ೫೧೬ ಕೋಟಿ ರೂಪಾಯಿಗಳನ್ನು ಈ ಉದ್ದೇಶಕ್ಕಾಗಿ ತೆಗೆದಿರಿಸಿದೆ. ಇದನ್ನು ಗಮನಿಸಿದರೆ. ಮುಂಬರುವ ವರ್ಷಗಳಲ್ಲಿ ಜನಸಂಖ್ಯಾ ನಿಯಂತ್ರಣದ ಬೃಹತ್ ಕಾರ್ಯಕ್ರಮವೇ ಇದ್ದಂತಾಯಿತು. ಇದು ನಿಜವಾಗಿಯೂ ಶ್ಲಾಘನೀಯವಾದಂತಾಯಿತು.

ಸರಕಾರವು ಇಲ್ಲಿಯುವರೆಗೆ ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ಸುಮಾರು ೫೦೦೦ ಕುಟುಂಬ ಯೋಜನೆಗೆ ಸಂಬಂಧಿಸಿದಂತೆ, ಪ್ರಾಥಮಿಕ ಕೇಂದ್ರಗಳನ್ನು ಸ್ಥಾಪಿಸಿದೆ. ಅಲ್ಲಿ

ಪುಕ್ಕಟೆ ಔಷಧ ಹಾಗೂ ಶಸ್ತ್ರ ಚಿಕಿತ್ಸೆಯ ವ್ಯವಸ್ಥೆ ಇರುವದು. ಸಾಧ್ಯವಿದ್ದಲ್ಲೆಲ್ಲ ತರಬೇತು ಪಡೆದ ವೈದ್ಯರು ಹಾಗೂ ದಾಯಿಗಳನ್ನು ನೇಮಿಸಲಾಗಿರುವುದು.

ಕೆಲವು ವರ್ಷಗಳ ಹಿಂದೆ ಶಸ್ತ್ರಚಿಕಿತ್ಸೆಗೆ ಒಳಗಾಗುವವರಿಗೆ, ಅದಕ್ಕೆ ಒಳಪಡಿಸುವವರಿಗೆ ಮತ್ತು ಸಂಬಂಧಿಸಿದ ವೈದ್ಯರಿಗೆ ನಗದು ಹಣ ಅಥವಾ ಟ್ರ್ಯಾನ್ಸಿಸ್ಟರ ರೇಡಿಯೊವನ್ನು ಕೊಡುವ ಯೋಜನೆಯೊಂದನ್ನು ಸರಕಾರವು ಪ್ರಾಯೋಗಿಕವಾಗಿ ಜಾರಿಗೆ ತಂದಿತು. ಇದರಿಂದ ಕೆಲವು ಗ್ರಾಮೀಣ ಜನರು ಹಾಗೂ ಬಡ ವರು ಆಕರ್ಷಿತರಾದರು.

ಗರ್ಭನಿರೋಧಕ ಮಾತ್ರೆಗಳು ಮತ್ತು ವಂಕಿಗಳನ್ನು ಸಹ ಸರಕಾರವು ಪ್ರಚುರಪಡಿಸಿದ್ದಲ್ಲದೇ ಅವುಗಳನ್ನು ಕಡಿಮೆ ಬೆಲೆಗೂ ಒದಗಿಸುತ್ತಲಿದೆ. ಇವು ವಿಶೇಷವಾಗಿ ನಗರ ಪ್ರದೇಶಗಳಲ್ಲಿ ಸಾಕಷ್ಟು ಜನಪ್ರಿಯವಾಗಿರುವವು. ಇದರ ಪರಿಣಾಮವಾಗಿ ಕಳೆದ ಕೆಲವು ವರ್ಷಗಳಲ್ಲಿ ಲಕ್ಷಗಟ್ಟಲೆ ಕೂಸುಗಳು ಹುಟ್ಟುವದನ್ನು ತಪ್ಪಿಸಲಾಗಿದೆ.

ಸರಕಾರವು ಸಾಕಷ್ಟು ಪ್ರಚಾರವನ್ನೂ ವೈವಿಧ್ಯಮಯ ರೀತಿಯಲ್ಲಿ ಕೈಕೊಂಡಿದೆ. ಅದೇನಂದರೆ, ಸಿನೇಮಾ ಮಂದಿರಗಳಲ್ಲಿ ಸ್ಲೈಡು ಕೊಡುವದು, ಆಕಾಶವಾಣಿ ಕೇಂದ್ರಗಳ ಮೂಲಕ ಭಾಷಣಗಳನ್ನು ಬಿತ್ತರಿಸುವದು, ಸಿಟಿ ಬಸ್ಸುಗಳಲ್ಲಿ ಹಾಗೂ ಕೂಡುರಸ್ತೆಗಳಿದ್ದಲ್ಲಿ ಫಲಕಗಳನ್ನು ಹಚ್ಚಿಸುವದು, ಇವೇ ಮೊದಲಾದ ಕಾರ್ಯಗಳಾಗಿವೆ. "ಎರಡು ಬೇಕು. ಮೂರು

ಸಾಕು", "ಆರತಿಗೊಬ್ಬ ಮಗಳು, ಕೀರ್ತಿಗೊಬ್ಬ ಮಗ", "ಒಂದು ಅಸ್ತಿ, ಎರಡು ಜಾಸ್ತಿ" ಮುಂತಾಗಿ ಬರೆದಿರುವ ಫಲಕಗಳು ನೋಡಿದಲ್ಲೆಲ್ಲ ಕಣ್ಣಿಗೆ ಬೀಳುವವು. ಕುಟುಂಬ ಯೋಜನೆಯ ಬಗ್ಗೆ ವಿಚಾರಗೋಷ್ಠಿಗಳು ಹಾಗೂ ಪರಿಷತ್ತುಗಳನ್ನೂ ಏರ್ಪಡಿಸ ಲಾಗುತ್ತಿದೆ. ಕುಟುಂಬ ಯೋಜನಾ ಶಾಖೆಯು ಮಿತಸಂತಾನದ ಬಗ್ಗೆ ಶಾಲೆ, ಕಾಲೇಜು ಹಾಗೂ ವಿಶ್ವವಿದ್ಯಾಲಯಗಳಲ್ಲಿ ಚಲ ಚಿತ್ರಗಳನ್ನು ಪ್ರದರ್ಶಿಸಲು ಏರ್ಪಾಡು ಮಾಡಿದೆ. ಗ್ರಾಮೀಣ ಪ್ರದೇಶಗಳಲ್ಲಿಯೂ ಸಹ ಇಂಥ ಪ್ರದರ್ಶನಗಳು ನಡೆಯುವವು.

ಕೆಲವು ರಾಜ್ಯಸರಕಾರಗಳು ನಾಲ್ಕನೇ ಮಗುವನ್ನು ಪಡೆದ ಸರಕಾರಿ ನೌಕರನ ವಾರ್ಷಿಕ ಪಗಾರ ಹೆಚ್ಚಳ ಅಥವಾ ಬಡತಿ ಯನ್ನು ತಡೆಹಿಡಿಯುವ ಯೋಜನೆ ಮಾಡಿದ್ದುಂಟು. ಕುಟುಂಬ ದಲ್ಲಿಯ ನಾಲ್ಕನೆ ಅಥವಾ ಅದರ ಮುಂದಿನ ಮಕ್ಕಳಿಗೆ ಶಾಲೆಗಳಲ್ಲಿ ಸಿಗುವ ಉಚಿತ ಶಿಕ್ಷಣ, ಸ್ಕಾಲರಶಿಪ್ ಮುಂತಾದ ಸೌಲಭ್ಯಗಳನ್ನು ನಿರಾಕರಿಸುವ ಯೋಚನೆಯೂ ಇದೆ.

ಇಂಡಿಯನ್ ಪಾಪ್ಯುಲೇಶನ್ ಇನ್‌ಸ್ಟಿಟ್ಯೂಟದಂಥ ಸಂಸ್ಥೆ ಗಳನ್ನು ಸಹ ಸ್ಥಾಪಿಸಲಾಗಿದೆ. ಉದ್ದೇಶವೆಂದರೆ, ಜನಸಂಖ್ಯೆಗೆ ಸಂಬಂಧಿಸಿದ ಅಂಕಿಸಂಖ್ಯೆಗಳನ್ನು ಕಲೆಹಾಕುವದು. ಕುಟುಂಬ ಯೋಜನೆಯನ್ನು ಸಂಘಟಿಸುವದೇ ಆಗಿದೆ. ಇದಕ್ಕೆ ಜಾಗತಿಕ ಆರೋಗ್ಯ ಸಂಸ್ಥೆಯಿಂದ ಸಹಾಯವೂ ಸಿಗುವದು. ಪ್ರತಿಯೊಂದು ಜಿಲ್ಹೆಯಲ್ಲಿಯೂ ಪ್ರಚಾರದ ಮುಖ್ಯಾಧಿಕಾರಿಯು ಇರುತ್ತಿದ್ದು ಅವನು ಪ್ರತಿ ತಾಲೂಕಿನಲ್ಲಿಯೂ ಕಾರ್ಯಕ್ರಮವನ್ನು ಯೋಜಿಸು ತ್ತಾನೆ. ಇದಕ್ಕೆ ವಿಶೇಷ ಸಿಬ್ಬಂದಿ ಹಾಗೂ ವಾಹನಗಳುಂಟು.

ಶಾಲೆ ಕಾಲೇಜುಗಳಲ್ಲಿ ಜನಸಂಖ್ಯಾ ಯೋಜನೆ ಬಗ್ಗೆ ಭಾಷಣಗಳನ್ನೂ ಮಾಡುತ್ತಾರೆ.

ಇಷ್ಟೇ ಅಲ್ಲದೆ ವಿವಾಹಯೋಗ್ಯ ವಯೋಮಿತಿಯನ್ನು ಎತ್ತರಿಸುವದು. ಗರ್ಭಪಾತವನ್ನು ಕಾಯಿದೆಬದ್ಧವಾಗಿ ಕ್ರಮಗೊಳಿಸುವದು ಇತ್ಯಾದಿ ಕ್ರಮಗಳನ್ನು ತೆಗೆದುಕೊಳ್ಳುವಲ್ಲಿ ಕಾರ್ಯಪ್ರವೃತ್ತವಾಗಿದೆ. ಇವು ದಿಟ್ಟ ಮತ್ತು ಕ್ರಾಂತಿಕಾರಕ ಹೆಜ್ಜೆಗಳೇ ಸರಿ. ಕುಟುಂಬ ಯೋಜನೆ ಸಿಬ್ಬಂದಿಯ ತರಬೇತಿಗಾಗಿ ದೊಡ್ಡದೊಡ್ಡ ನಗರಗಳಲ್ಲಿ ವಿಶೇಷ ಸಂಸ್ಥೆಗಳನ್ನು ತೆರೆಯಲಾಗಿದೆ. ಹಾಗೆ ಆಸ್ಪತ್ರೆಗಳಲ್ಲಿ ದಾಯಿಗಳು ವಗೈರೆ ಶಸ್ತ್ರಚಿಕಿತ್ಸೆಯ ಬಗ್ಗೆ ತಾಯಂದಿರಿಗೆ ತಿಳುವಳಿಕೆ ನೀಡಿ ಪ್ರೋತ್ಸಾಹಿಸುತ್ತಾರೆ.

ಇತ್ತೀಚಿನ ವರುಷಗಳಲ್ಲಿ ಕೆಲವು ಮಹಮ್ಮದೀಯ ರಾಷ್ಟ್ರಗಳು ಸಹ ಈ ದಿಶೆಯಲ್ಲಿ ಹೆಜ್ಜೆ ಇಡಲಾರಂಭಿಸಿವೆ. ಇರಾಣ ದೇಶದಲ್ಲಿ ಮಹಿಳೆಯರು ಏಕಪತ್ನೀ ವಿವಾಹ ಪದ್ಧತಿಯನ್ನು ಜಾರಿಗೊಳಿಸಲು ಚಳುವಳಿಯನ್ನೇ ನಡೆಸಿದ್ದುಂಟು. ಭಾರತದಲ್ಲಿ ಅದರಲ್ಲಿಯೂ ವಿಶೇಷವಾಗಿ ಮಹಾರಾಷ್ಟ್ರ ರಾಜ್ಯದಲ್ಲಿ ಮುಸ್ಲಿಂ ಮಹಿಳೆಯರು ಏಕಪತ್ನೀ ವಿವಾಹ ಪದ್ಧತಿಯ ಪರವಾಗಿ ಈಗಾಗಲೇ ಆಂದೋಲನ ನಡೆಸಿದ್ದಾರೆ.

ಕಮ್ಯುನಿಷ್ಟ ದೇಶಗಳಲ್ಲಿ ಕೂಡ ಅದರಲ್ಲಿಯೂ ಕಮ್ಯುನಿಷ್ಟ ಚೀನದಲ್ಲಿ ಮಿತಸಂತಾನದ ಬಗ್ಗೆ ಪ್ರಜ್ಞೆ ಮೂಡಿಬರುತ್ತಲಿದೆ. ನಮ್ಮ ದೇಶದಲ್ಲಿಯ ಕಮ್ಯುನಿಷ್ಟರೂ ಈಗೀಗ ಜನಸಂಖ್ಯಾ ನಿಯಂತ್ರಣವನ್ನು ಪ್ರತಿಪಾದಿಸಲಾರಂಭಿಸಿದ್ದಾರೆ. ಇದರ ಆವಶ್ಯಕತೆ ಎಳ್ಳಷ್ಟೂ ಇಲ್ಲದ ಸೋವಿಯತ್ ಒಕ್ಕೂಟದಲ್ಲಿ ಕೂಡ ಜನರ

ಜೀವನಮಟ್ಟ ಏರಿದಂತೆ ಸಣ್ಣ ಕುಟುಂಬಗಳತ್ತ ಬಲವಾದ ಒಲವು ಕಂಡುಬರುತ್ತಲಿದೆ. ಇಷ್ಟೇಅಲ್ಲ, ಅಲ್ಲಿಯೂ ಕೂಡ ಬ್ರಹ್ಮಚಾರಿಗಳ ಸಂಖ್ಯೆ ಹೆಚ್ಚುತ್ತಲಿದೆಯಂತೆ !

ಭಾರತದಲ್ಲಿಯೂ ಸಹ ನಿರುದ್ಯೋಗತನ, ಬಡತನ, ಜೀವನಾವಶ್ಯಕ ಜೀನಸುಗಳ ಬೆಲೆಯೇರಿಕೆ, ಶಿಕ್ಷಣದ ಪ್ರಸಾರ ಮತ್ತು ಸಾಮಾಜಿಕ ಬದಲಾವಣೆಗಳಿಂದಾಗಿ, 'ದೊಡ್ಡ ಕುಟುಂಬವು ಒಂದು ಶಾಪ' ಎಂಬ ಭಾವನೆ ಬೆಳೆಯುತ್ತಲಿದೆ. ಉದಾಹರಣೆಗೆ ಬೃಹನ್‌ಮುಂಬಯಿಯಲ್ಲಿ ಜನನ ಪ್ರಮಾಣ ಪ್ರತಿ ಸಾವಿರಕ್ಕೆ ೨೦ಕ್ಕೆ ಇಳಿದಿದೆ.

# ೬. ಸಮಾಪ್ತಿ

ಈವರೆಗೆ ಸಮೀಕ್ಷಿಸಿದ ಅಂಕಿಸಂಖ್ಯೆ ಮತ್ತು ಸಂಗತಿಗಳನ್ನು ಗಮನಕ್ಕೆ ತಂದುಕೊಂಡರೆ, 'ಎಂಥ ಕಾರ್ಮೋಡಕ್ಕಾದರೂ ಬೆಳ್ಳಿಯ ಅಂಚು ಉಂಟು' ಎಂಬ ನಿರ್ಣಯಕ್ಕೆ ಬರಬೇಕಾಗುತ್ತದೆ. ಕಳೆದ ಕೆಲ ತಿಂಗಳುಗಳಲ್ಲಿ ಸಮಾವೇಶಗೊಂಡ ಅಂತರ್ರಾಷ್ಟ್ರೀಯ ಆಹಾರ ಪರಿಷತ್ತು (ರೋಮ) ಮತ್ತು ಅಂತರ್ರಾಷ್ಟ್ರೀಯ ಜನ ಸಂಖ್ಯಾ ಪರಿಷತ್ತು (ಬುಖಾರೆಸ್ಟ) ಗಳೇ ಸ್ಪಷ್ಟ ನಿದರ್ಶನಗಳಾಗಿವೆ. ಇದಲ್ಲದೆ ಕೆಲ ದಿನಗಳ ಹಿಂದೆ, ಸಂ. ರಾ. ಸಂಸ್ಥೆಯು ೩೨ ರಾಷ್ಟ್ರಗಳದೊಂದು ಅಂತರ್ರಾಷ್ಟ್ರೀಯ ಸಮಿತಿಯೊಂದನ್ನು ನೇಮಿಸಿದೆ. ಅವರಲ್ಲಿ ಭಾರತವೂ ಸದಸ್ಯ ರಾಷ್ಟ್ರವಾಗಿದೆ. ಅದರ ಉದ್ದೇಶ

ವೆಂದರೆ, ಜನಸಂಖ್ಯೆಯು ಬೆಳವಣಿಗೆ ಮತ್ತು ಆಹಾರ ಪೂರೈಕೆಯ ಪರಿಸ್ಥಿತಿಯ ಬಗ್ಗೆ ಅಧ್ಯಯನ ನಡೆಸಿ ಕಾಲಕಾಲಕ್ಕೆ ಸಂ. ರಾ. ಸಂಸ್ಥೆಗೆ ವರದಿ ಸಲ್ಲಿಸುವದು ಮತ್ತು ಸಲಹೆ ಸೂಚನೆಗಳನ್ನು ನೀಡುವದೇ ಆಗಿದೆ. ಜಗತ್ತಿನಾದ್ಯಂತ ಈ ಸಮಸ್ಯೆಯ ಬಗ್ಗೆ ಕಣ್ದೆರೆದಿರುವದು ಒಂದು ಸಮಾಧಾನಕರ ಸಂಗತಿ.

ಅತ್ತ ವಿಶ್ವಬ್ಯಾಂಕು, ವಿಶ್ವಹಣಕಾಸಿನ ನಿಧಿ ಮುಂತಾದ ವಿಶ್ವಸಂಘಟನೆಗಳು ಅಂತರ್‌ರಾಷ್ಟ್ರೀಯ ಹಣಕಾಸಿನ ನೆರವಿಗೆ ಜನ ಸಂಖ್ಯಾ ನಿಯಂತ್ರಣದ ಶರತ್ತು ಹಾಕುತ್ತಿರುವದು ಯಥಾ ಯೋಗ್ಯವೇ ಆಗಿದೆ. ಇದರಿಂದಾಗಿ ಅಭಿವೃದ್ಧಿಪರ ರಾಷ್ಟ್ರಗಳು ಜನಸಂಖ್ಯಾ ನಿಯಂತ್ರಣವನ್ನು ಕೈಕೊಳ್ಳಲುದ್ಯುಕ್ತವಾಗಿರುವದರಲ್ಲಿ ಆಶ್ಚರ್ಯವೇನಿಲ್ಲ.

'ಈಗ ಅಥವಾ ಎಂದಿಗೂ ಇಲ್ಲ' ಎಂಬಂತೆ, ಈಗ ನಾವು ಜನಸಂಖ್ಯಾ ಸ್ಫೋಟವನ್ನು ತಡೆಗಟ್ಟದಿದ್ದಲ್ಲಿ ಒಂದಿಲ್ಲೊಂದು ದಿನ ಮಾಲ್ಥಸ್‌ನ ಸಿದ್ಧಾಂತದ ಪ್ರಕಾರ ಇಡೀ ವಿಶ್ವವೇ ಅತಿ ಜನ ದ್ಭರಿತವಾಗಿ ಜಗತ್ಪ್ರಳಯವೇ ಆಗಬಹುದು. ಆಗ ಇಡೀ ವಿಶ್ವವೇ ಬರಗಾಲದ ದವಡೆಯಲ್ಲಿ ಸಿಕ್ಕು ನುಚ್ಚುನೂರಾಗುವದರಲ್ಲಿ ಯಾವ ಸಂದೇಹವೂ ಇಲ್ಲ. ಪರಿಸ್ಥಿತಿ ತೀರಾ ವಿಷಮಿಸಿದರೆ ಆಗ ಏನೂ ಮಾಡಲಿಕ್ಕೆ ಬರುವದಿಲ್ಲ. ಚಿಂತಿಸಿಯೂ ಉಪಯೋಗವಿಲ್ಲ. ಮಾನವಕುಲದ ವಿನಾಶವನ್ನು ತಪ್ಪಿಸಲು ಕಾಲ ಮಿಂಚುವ ಮೊದಲೇ ಎಚ್ಚತ್ತು ಅವಸರದ ಮತ್ತು ಪರಿಣಾಮಕಾರಿ ಕ್ರಮ ಗಳನ್ನು ಕೈಕೊಳ್ಳುವದು ಅತ್ಯವಶ್ಯವಿದೆ.

ಇದನ್ನು ಮನಗಂಡ ಸಂ. ರಾ. ಸಂಸ್ಥೆಯು ಈ ವಿಷಯ ದತ್ತ ಎಲ್ಲ ರಾಷ್ಟ್ರಗಳ ಗಮನವನ್ನು ಸೆಳೆದಿದೆ. ಈಗ ಅದಕ್ಕೆ ಎಲ್ಲ ದೇಶಗಳೂ ಹಾರ್ದಿಕ ಸಹಕಾರ ನೀಡುವದು ಅಗತ್ಯವಿದೆ. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ರಾಷ್ಟ್ರಗಳು ಮತ್ತು ನಾಯಕರು, ಜಾತಿ, ಭಾಷೆ, ವರ್ಣ, ರಾಷ್ಟ್ರೀಯತೆ ಮತ್ತು ಅಧಿಕಾರ ರಾಜಕಾರಣ ಗಳನ್ನು ಬದಿಗೊತ್ತಬೇಕು. ಬಂಡವಾಳಶಾಹಿ ಮತ್ತು ಸಮತಾ ವಾದದ ಸೈದ್ಧಾಂತಿಕ ಘರ್ಷಣೆಯೂ ಇದಕ್ಕೆ ಅಡ್ಡಿಯಾಗ ಕೂಡದು. ಎಂದಾಗಲೇ ಈ ಬೃಹತ್ ಸಮಸ್ಯೆಯ ನಿವಾರಣೆ ಸಾಧ್ಯವಾದೀತು. ೧೯೭೪ನೇ ಇಸ್ವಿಯನ್ನು 'ಅಂತರ್ರಾಷ್ಟ್ರೀಯ ಜನಸಂಖ್ಯಾ ವರುಷ' ವೆಂದು ನಾವೆಲ್ಲ ಆಚರಿಸಿದ್ದು ಯಶಸ್ವಿ ಯಾಗುವದೆಂದು ಹಾರೈಸುವಾ.

---

## ಉಪನ್ಯಾಸ ಗ್ರಂಥಮಾಲೆಯ
## ಇತ್ತೀಚಿನ ಪ್ರಕಟನೆಗಳು

### ಬೆಲೆ : ಪ್ರತಿ ಒಂದಕ್ಕೆ ೨೫ ಪೈಸೆ

೧. ಆಚಣ್ಣ ಕವಿಯ ವರ್ಧಮಾನ ಪುರಾಣ —ಬಿ. ಬಿ. ಮಹೀಶವಾಡಿ

೨. ಕನ್ನಡದಲ್ಲಿ ತ್ರಿಪದಿ ಸಾಹಿತ್ಯ —ಎಸ್. ಎಸ್. ಕೋತಿನ

೩. ಕನ್ನಡ ಸಾಹಿತ್ಯದಲ್ಲಿ ದಃರಂತ ದೃಷ್ಟಿ —ಎಚ್. ಜಿ. ಲೋಕೂರ

೪. ದ್ರಾವಿಡ ಭಾಷೆಗಳು —ಸಂಗಮೇಶ ಸವದತ್ತಿಮಠ

೫. ಪೋಲಿಯೋ ಮೈಲೈಟಿಸ್ —ಎಸ್. ಜೆ. ನಾಗಲೋಟಿಮಠ

೬. ಕಾರ್ಮಿಕರ ಸಮಸ್ಯೆಗಳು —ಎಸ್. ಜಿ. ಕರಭಂಟನಾಳ

೭. ಅನುಭಾವಿ ಕವಿ ಕಡಕೋಳ ಮಡಿವಾಳಪ್ಪ —ಲಿಂಗಣ್ಣ ಸತ್ಯಂಪೇಟೆ

೮. ಅಣಬೆಗಳು —ಎಂ. ಎಸ್. ಎಸ್. ರಾವ್

೯. ಕಿವಿ, ಮೂಗು, ಗಂಟಲಿನ ಸಾಮಾನ್ಯ ರೋಗಗಳು —ಎಂ. ವ್ಹಿ. ವೆಂಕಟೇಶಮೂರ್ತಿ

೧೦. ಸ್ಥಳಿಕ ಗಳಗಂಡ —ಪಿ. ಎಸ್. ಶಂಕರ್

---

ಪ್ರಸಾರಾಂಗ ವಿಸ್ತರಣ ಹಾಗೂ ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೩